# ಸಂಸಾರ ಚಿತ್ರ

ಆನಂದಕಂದ

ಸಾಹಿತ್ಯ ಭಾಂಡಾರ
ಹುಬ್ಬಳ್ಳಿ

## ಶ್ರೀ. ದಿವಾಕರರ ಗ್ರಂಥಗಳು

| | | |
|---|---|---|
| ಹರಿಭಕ್ತಿಸುಧೆ | ೨ | ೦ |
| ವಚನಶಾಸ್ತ್ರ ರಹಸ್ಯ | ೫ | ೦ |
| ಅಂತರಾತ್ಮನಿಗೆ | ೦ | ೧೨ |
| ಕರ್ಮಯೋಗ | ೦ | ೧೨ |
| ಭಕ್ತಿಸೂತ್ರಗಳು | ೦ | ೬ |
| ಗೀತೆಯ ಗುಟ್ಟು | ೨ | ೮ |
| ಶ್ರೀರಾಮಕೃಷ್ಣ ಚರಿತಾಮೃತ | ೩ | ೦ |
| ಉಪನಿಷತ್‌ಪ್ರಕಾಶ | ೨ | ೮ |
| ಉಪನಿಷತ್ ಕಥಾವಲಿ | ೦ | ೧೨ |
| ಉಪನಿಷತ್ ರಹಸ್ಯ | ೩ | ೦ |
| ಸತ್ಯಾಗ್ರಹ | ೩ | ೮ |
| ಸೆರೆಯ ಮರೆಯಲ್ಲಿ | ೩ | ೦ |
| ಪ್ರಾಂತಭಾಷೆ-ರಾಷ್ಟ್ರಭಾಷೆ | ೦ | ೬ |
| ಏಕತಂತ್ರ ಕರ್ನಾಟಕ | ೦ | ೮ |
| ನಾಗರಿಕ ( ಹಿಂದಿಯಲ್ಲಿ ) | ೦ | ೮ |

ಮುಂದಿನ ಪ್ರಕಟನೆ :

**'ಕಾಂಗ್ರೆಸ್ ರನ್ನ ಮಹೋತ್ಸವ ಗ್ರಂಥ'**

ನೂರಾರು ಬಣ್ಣದ ಚಿತ್ರಗಳು,

ಸುಂದರ ಮುದ್ರಣ, ಕ್ಯಾಲಿಕೊ ಬ್ಯಾಂಡು

**ಬೆಲೆ ಸುಮಾರು ೧೨ ರೂ.**

ಪ್ರಕಟನೆ: ೧೯೪೭ ಅಗಸ್ಟ್ ತಿಂಗಳಲ್ಲಿ

ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

ದಿನೇಳನೆಯ ಪ್ರಕಟನೆ

# ಸಂಸಾರ ಚಿತ್ರ

(ಒಂಬತ್ತು ಕತೆಗಳು)



ಆನಂದಕಂದ

ಸಾಹಿತ್ಯ ಭಾಂಡಾರ
ಹುಬ್ಬಳ್ಳಿ

ಪ್ರಕಾಶಕರು :
ಶ್ರೀ. ರಂ. ರಾ. ದಿವಾಕರ
ಕಾರ್ಯದರ್ಶಿಗಳು
ಕರ್ನಾಟಕ ಶಿಕ್ಷಣ ಸಮಿತಿ
ಹುಬ್ಬಳ್ಳಿ

ಮುದ್ರಕರು :
ವಿ. ಯ. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್
ಧಾರವಾಡ



ಮೊದಲ ಮುದ್ರಣ ೧೯೩೪
ಎರಡನೆ ಮುದ್ರಣ ೧೯೪೭

ಬೆಲೆ ೨—೦—೦



ಈ ಮುದ್ರಣಕ್ಕೆ ಅವಶ್ಯವಿದ್ದ ಹಿಂದಿನ ಮುದ್ರಣದ ಪ್ರತಿಯನ್ನು ಕೊಟ್ಟವರು ಹುಬ್ಬಳ್ಳಿಯ ಶ್ರೀಸರಸ್ವತಿ ವಿದ್ಯಾರಣ್ಯ ವಾಚನಾಲಯದವರು. ಅವರಿಗೆ ನಾವು ಕೃತಜ್ಞರು.

—ಪ್ರಕಾಶಕರು

# ಮೊದಲುನುಡಿ

ನನ್ನ ಎಲ್ಲ ಕಥೆಗಳನ್ನು ಒಂದೆಡೆಗೆ ಸೇರಿಸಿ ಪ್ರಕಟಿಸಲು ಅನೇಕ ಜನ ಆಪ್ತಸ್ನೇಹಿತರು ನನ್ನನ್ನು ಆಗಾಗ ಒತ್ತಾಯಪಡಿಸುತ್ತಿದ್ದರು. ಪೆಟ್ರೋಲು ಇಲ್ಲದ ಮೋಟಾರನ್ನು ಮುಂದೆ ನಡೆಯೆಂದು ನೂಕಿದರೆ ಅದು ನಡೆಯ ಬೇಕಾದರೂ ಹೇಗೆ! ಕರ್ನಾಟಕ ಶಿಕ್ಷಣಸಮಿತಿಯವರ ನೆರವು ದೊರೆಯಿತು; ನನ್ನ ಆಪ್ತಸ್ನೇಹಿತರದೂ ನನ್ನದೂ ಮನೋರಥವು ಮುಂದು ವರಿಯಲು ಮಾರ್ಗವಾಯಿತು ಇದಕ್ಕಾಗಿ ನನ್ನಂತೆ ನನ್ನ ಕತೆಗಳನ್ನು ಓದಲು ಅಪೇಕ್ಷಿಸುವ ಜನರೂ ಕರ್ನಾಟಕ ಶಿಕ್ಷಣ ಸಮಿತಿಯ ಉಪಕಾರ ದಿಂದ ಕಟ್ಟುವಡೆದವರಾಗಿರುವರು.

ಈ ಸಂಗ್ರಹದಲ್ಲಿ ನನ್ನ ಎಲ್ಲ ಕತೆಗಳೂ ಇಲ್ಲವೆಂಬುದನ್ನು ಬೇರೆ ಯಾಗಿ ಹೇಳಬೇಕಾಗಿಲ್ಲ. ಈ ಒಂಬತ್ತು ಕತೆಗಳಲ್ಲಿ 'ಹೆಣ್ಣಿನ ಕಣ್ಣು' 'ನೀನು ಪುಟ್ಟನ ತಾಯಿ' ಇವೆರಡು ಈ ಮೊದಲು ಎಲ್ಲಿಯೂ ಪ್ರಕಟ ವಾಗದ ಹೊಸ ಕತೆಗಳು. **'ನನ್ನ ಹುಚ್ಚು' 'ಅನಾಥ ಬಂಧು' 'ಸಂಸಾರವೆಂದರೆ ಸೂಜಿಗಲ್ಲು'** ಇವು ಮೂರು 'ಸ್ವಧರ್ಮ' ಮಾಸ ಪತ್ರಿಕೆಯಲ್ಲಿ ಆರೇಳು ವರ್ಷಗಳಿಗೆ ಮೊದಲು ಪ್ರಕಟವಾದುವು. **'ಮಂಜಿನ ನೀರು' 'ಆ ಹೆಂಗಸು' 'ಜೀವದ ಹೂ'** ಇವು 'ಜಯಕರ್ನಾಟಕ'ದ ಬೇರೆ ಬೇರೆ ಸಂಚಿಕೆಗಳಲ್ಲಿ ಪ್ರಸಿದ್ಧವಾದುವು. **'ಬಾಡಿಬಿದ್ದ ಹೂ'** ಎಂಬುದು ಜ. ಕ. ಗ್ರಂಥಮಾಲೆಯ ಕುಸುಮವೊಂದಾದ 'ಮಂಗನ ಮೆರವಣಿಗೆ'ಯಲ್ಲಿ ಅಚ್ಚಾದುದು.

ಈ ಕತೆಗಳ ಗುಣದೋಷಗಳ ಬಗೆಗೆ ನಾನೇನು ಹೇಳಬೇಕಾಗಿದೆ? ಜಗತ್ತಿನಲ್ಲಿ ತಮ್ಮ ಕೃತಿಗಳಲ್ಲಿ ದೋಷಗಳನ್ನು ತಾವೇ ಕಂಡು ಹಿಡಿಯುವ ವರು ಕಡಿಮೆ. ಅವು ಸರ್ವಗುಣಸಂಪನ್ನವಿರುವುವೆಂದೇ ಅವರ ಭಾವನೆ. ನಾನಾದರೂ ಈ ನಿಯಮಕ್ಕೆ ಅಪವಾದವೇತಕ್ಕಾಗಬೇಕು? ನನ್ನ ಈ ಕತೆ

ಗಳೆಲ್ಲವೂ ಕಲಾಪರಿಪೂರ್ಣವಾದುವುಗಳೆಂಬ ನಂಬಿಗೆಯಿಂದಲೇ ನಾನು ಕನ್ನಡ ರಸಿಕರ ಕೈಯಲ್ಲಿ ಇವುಗಳನ್ನು ಕೊಡುವ ಧೈರ್ಯ ಮಾಡಿದ್ದೇನೆ. ಓದಿ ಮೆಚ್ಚಿದವರ ಹೊಗಳಿಕೆಯನ್ನು ಕೇಳಿದೆನೆಂದರೆ ನನ್ನ ನಂಬುಗೆಯು ಗಟ್ಟಿಗೊಳಬಹುದು; ಮನಸ್ಸಿಗೆ ಒಪ್ಪಿಗೆಯಾಗದವರ ತೆಗಳಿಕೆಯನ್ನು ಕೇಳಿದೆನೆಂದರೆ ಆ ನಂಬುಗೆಯ ವಿಷಯದಲ್ಲಿ ಶಂಕೆಯನ್ನು ತಾಳಬಹುದು, ಇಷ್ಟೇ.

"**ಸಂಸಾರ ಚಿತ್ರ**" ಎಂಬ ಹೆಸರಿನದೊಂದು ನಾಟಕವು ಬೆಂಗಳೂರು ಕಡೆಗೆ ಅಚ್ಚಾಗಿ ಪ್ರಸಿದ್ಧವಾಗಿದೆ. ಈ ಸಂಗತಿಯು ನನಗೆ ಮೊದಲೇ ತಿಳಿದಿದ್ದಲ್ಲಿ ಈ ಸಂಗ್ರಹದ ಹೆಸರು "ಸಂಸಾರ ಚಿತ್ರ" ಎಂದಿರದೆ ಇನ್ನಾವುದಾದರೂ ಇರಬಹುದಾಗಿದ್ದಿತು.

ವಿಜಯನಗರ, ಬೆಳಗಾಂವಿ
೨೫-೫-೧೯೩೪ ಇಸ್ವಿ

ಆನಂದಕಂದ

---

## ಪರಿವಿಡಿ

# ಹೆಣ್ಣಿನ ಕಣ್ಣು

೧

ಹಾಸಿದ್ದ ಶತರಂಜಿ—ಜಮಖಾನೆ—ಯ ಮೇಲೆ ರೋಹಿಣಿಯು ಕರುಣಾಸನವನ್ನು ಹಾಕಿ ಕುಳಿತಿದ್ದಾಳೆ. ಮುಖವು ಗಂಭೀರವಿಚಾರ ಮುದ್ರೆಯನ್ನು ತಳೆದಿದೆ. ಆಗಾಗ ಭ್ರೂಮಧ್ಯದಲ್ಲಿ ನೆಲಸಿಕೊಳುತಿರುವ ಕರಿಯಾಲಿಗಳು ಅದಾವ ಬಿಂಬದ ದರ್ಶನವನ್ನು ಪಡೆಯುತ್ತಿದ್ದುವೋ? ಮನಸಿನ ಸಮಾಧಿಗೆ ಮಧ್ಯೆಮಧ್ಯೆ ಭಂಗವುಂಟಾಗಲು, ಕಣ್ಣಾಲಿಗಳು ಕೆಳಕ್ಕಿಳಿಯುವುವು. ಕುಂಭಕಕ್ರಿಯೆಯಿಂದ ಬಿಗಿಹಿಡಿದ ಉಸಿರು ನಿಡಿದಾಗಿ ಹೊರಕ್ಕೆ ಬರುವುದು. ರೋಹಿಣಿಯ ಈಗಿನ ಭಾವಭಂಗಿಗಳನ್ನು ನೋಡಿದರೆ "ಇವಳೊಬ್ಬ ಯೋಗಿನಿಯು" ಎಂದು ಯಾರೂ ಹೇಳದಿರರು.

ಪುಸ್ತಕವೊಂದರ ಆಧಾರವನ್ನು ಆಶ್ರಯಿಸಿಕೊಂಡಿದ್ದ ಬಿಳಿಯ ಕಾಗದವನ್ನು, ರೋಹಿಣಿಯು ಎಡದ ಕೈ ತೊಡೆಯ ಮೇಲೆ ಇಟ್ಟುಕೊಂಡಿದೆ; ಬಲದ ಕೈಯಲ್ಲಿ ಒಂದು ಸೀಸದ ಕಡ್ಡಿ. ಆಗಾಗ ಹೃದಯದ ಉಕ್ಕು ಮುಖದಲ್ಲಿ ಮೂಡುತ್ತಿರುವುದು. ಅದಿರುತಿರುವ ಕೆಳದುಟಿಯನ್ನು ಮೇಲಿನ ಕೊನೆವಲ್ಲಗಳು ಕಚ್ಚಿನಿಲ್ಲಿಸುವುವು. ಕೈಯಲ್ಲಿಯ ಸೀಸದ ಕಡ್ಡಿ ತೊಡೆಯ ಕಾಗದದ ಮೇಲೆ– ತಡೆತಡೆದು– ಏನೇನನೋ ಬರೆಯುತ್ತಿರುವುದು. ಬರೆದ ಬರೆಹದಲ್ಲಿ ತನ್ನ ಹೃದಯದ ಪಡಿಯಚ್ಚು ಸರಿಯಾಗಿ ಮೂಡಿದಾಗ, ರೋಹಿಣಿಯ ಮುಖಸರಸಿಯಲ್ಲಿ ಮುಸುಕಿಕೊಂಡಿದ್ದ ಕರುಣೆಯ ಶೈವಾಲವು ಬದಿಗಾಗಿ, ಹರುಷದ ಕಿರುದೆರೆಗಳೆದ್ದಂತೆ ಕಾಣುವುದು; ಇನ್ನು ಆ ಚಿತ್ರ ಸರಿಯಾಗಿ ಮೂಡದಿದ್ದಾಗ–ಕಂದಿದ ಕಮಲವು ಮುದುರುವಂತೆ–ಆಕೆಯ ಮೊಗದಾವರೆಯೂ ಮುದುರಿಕೊಳ್ಳುವುದು. ಒಡತಿಯ ಮನವನ್ನರಿತು ನಡೆಯುವ ಸೀಸದ ಕಡ್ಡಿ, ಆಗ ತನ್ನ ಕಷ್ಟವನ್ನು ಲೆಕ್ಕಿಸದೆ, ತಾನು ಬರೆದುದನ್ನೆಲ್ಲ ಹೊಡೆದುಹಾಕಿಬಿಟ್ಟು, ಮತ್ತೆ ಆಕೆಯ ಆಜ್ಞೆಗಾಗಿ ಕಾದಿರುವುದು. ಸವಿಗಾರರಾದ ಸಾಹಿತಿಗಳಾದರೂ ರೋಹಿಣಿಯನ್ನು ಇಂದು ನೋಡಿದರೆ:

" ಪದವರಚಿಸುತಿಹಳು ಚಂದಿರವದನೆ ಮನದೊಳು
" ಹೃದಯದಾಸೆದೋರಲು ಬಹು ಹೆದರಿ ಬೆದರಿ ಚದುರಿ ಮಧುರಿ "
ಎಂದು ಕಾಲಿದಾಸನ ದುಷ್ಯಂತರಾಜನಂತೆ ಹಾಡಿಯೇ ಬಿಡುತ್ತಿದ್ದರು. ಆದರೆ ದುಷ್ಯಂತನ ಶಕುಂತಲೆಯ ಮುಖದಲ್ಲಿ ರತಿಯು ಸ್ಥಾಯಿಯಾಗಿದ್ದು ಕರುಣವು ಸಂಚಾರಿಯಾಗಿ ಇದ್ದಿರಬಹುದು. ರೋಹಿಣಿಯ ಮುಖದಲ್ಲಿಯೊ ಸ್ಥಾಯಿಯೂ ಕರುಣವೇ, ಸಂಚಾರಿಯೂ ಕರುಣವೇ! ಅಲ್ಲಿ ಇನ್ನೊಂದು ಭಾವಕ್ಕೆ ಎಡೆಯೇ ಇರಲಿಲ್ಲ.

ಕೊನೆಗೊಮ್ಮೆ ಬರೆಯುವುದು ಮುಗಿಯಿತು. ರೋಹಿಣಿಯು ಸೀಸದ ಕಡ್ಡಿಯನ್ನು ಕೆಳಕ್ಕಿಟ್ಟು, ಬರೆದ ಕಾಗದವನ್ನು ಎತ್ತಿಹಿಡಿದು, ಮೊದಲಿನಿಂದ ಕಡೆಯ ವರೆಗೆ ಮನಸಿನಲ್ಲಿಯೇ ಓದಿಕೊಂಡಳು. ಬಳಿಕ ಕೆಳಕ್ಕಿಟ್ಟ ಸೀಸದ ಕಡ್ಡಿಯನ್ನು ತೆಗೆದುಕೊಂಡು, ತಾನು ಬರೆದ– ಅಂದಿನ– ಆ ಹೊಸ ಕವನದ ತಲೆಯ ಮೇಲೆ " ವನಮಲ್ಲಿಕೆ" ಎಂದು ಹೆಸರನ್ನು ಬರೆದಳು; ಸೀಸದ ಕಡ್ಡಿಯನ್ನು ನೆಲಕ್ಕೆ ತಟ್ಟುತ್ತ, ನಿಧಾನವಾಗಿ ತಾಲವನ್ನು ಹಿಡಿದು. ರೋಹಿಣಿಯು ಮೆಲುದನಿಯಲ್ಲಿ ತನ್ನಾ ಕವನವನ್ನು ಹಾಡಲುತೊಡಗಿದಳು.

೧

ಅರಳಿ ನಿಂದಿಹೆನು,
ಹುರುಳ ಹೊನಲನ್ನು
ಬರಿದೆ ಗಾಳಿಯಲಿ
ಹರಡುತಿಹೆ ನಾನು.

ಮುಳ್ಳ ಕೊಂಪೆಗಳು
ಕಳ್ಳಿ ಕಂಟಿಗಳು
ನನ್ನ ವೈರಿಯು
ಮಾಡಿಹವು ಮರೆಯ.

೨

ಮಾಲಿಗರು ಬಂದು
ಮಲರ ತಿರಿವಂದು
ನನ್ನ ಮುಸುಕಿರುವಾಗ
ಮುಳ್ಳುಮೆಳೆ ಮುರಿದು—

ಒಡೆಯನಡಿಯೆಡೆಗೆ
ಒಯ್ಯುಬಹುದೆಂದೆ,
ನಡೆಯೆ ಬಿಟ್ಟವರು
ಸುಯ್ದು ನಾನಿಂದೆ.

೩

ದುರುಳ ದುಂಬಿಗಳು
ಹುರುಳನೆಲ್ಲವನು
ಸುರಿಯುವಾಸೆಯಲಿ
ಸುಳಿಯುತಿಹವಿಲ್ಲಿ.

ಚೆಲುವಿನದು ನಿಲಯ
ನನ್ನದೀ ಕಾಯ,
ಕಾಡ ಹುಳುಗಳವು
ಕೊರೆಯ ಬರುತಿಹವು.

೪

ಅಂದವಿರದಿರುವ
ಗಂಧವಿರದಿರುವ
ಕೀಳು ಕುಸುಮಂಗಳು
ಹೊಂದುವವು ಪದವ ;

ದೇವನೊಡನಾಡಿ
ಜೀವದೆಡೆ ನೀಡಿ
ಧನ್ಯವೆನಿಸುವುವು
ತಮ್ಮ ಜೀವನವು.

೫

ನನ್ನ ಜನ್ಮವಿದು
ಮಣ್ಣಲಿಯೆ ಬಿದ್ದು
ಮಣ್ಣೆ ಆಗುವುದು;
ಏನು ಮಾಡುವುದು.... ?

ಬಾರ ಬಿರುಗಾಳಿ !
ನನ್ನ ಮೊರೆಕೇಳಿ !
ಬಾರ ಬಿರುಗಾಳಿ
ಭೀಕರತೆ ತಾಳಿ !

೬

ಘೋರೆಂದು ಬೀಸು
ತೋರಸೆರೆ ಬಿಡಿಸು,
ತೂರು ಬಾಂದಳಕೆ !
ಸೇರಿಸಾ ಪದಕೆ !

ಒಡೆಯನಡಿಗಳೊಳು
ಬೆಡಗಿನೀ ಬಾಳು
ಮುಡಿಪಾಗಿ ಇಡುವೆ,
ಪೂರ್ಣತೆಯ ಪಡೆವೆ.

ಕವನದಲ್ಲಿ ಹುದುಗಿಕೊಂಡಿದ್ದ ಆರ್ತ ಭಾವಕ್ಕೆ ತಕ್ಕುದಾದುದು ರೋಹಿಣಿಯು ಹಾಡಿನ ರಾಗ. ಒಂದು ಸಲ ಪೂರ್ಣವಾಗಿ ಹಾಡಿದಳು ; ಶೂನ್ಯದೃಷ್ಟಿಯುವಳಾಗಿ ಸುಮ್ಮನೆ ಕುಳಿತಳು. ಒಂದೆರಡು ನಿಮಿಷಗಳಾದ ಮೇಲೆ, ಮತ್ತೆ ಅವಳ ಕಣ್ಣುಗಳು ಕವನವನ್ನು ಬರೆದ ಕಾಗದದ ಮೇಲೆ ನಿಂತುಬಿಟ್ಟುವು. ಒಂದೆರಡು ಕಂಬನಿಗಳು ಕೆಳಕ್ಕಿಳಿದು ಕೈಯಲ್ಲಿಯ ಕಾಗದವನ್ನು ಒದ್ದೆಯಾಗಿಸಿದುವು.

ಹಠಾತ್ತಾಗಿ ರೋಹಿಣಿಯ ತಂದೆ ಅಲ್ಲಿಗೆ ಬಂದರು. ಕೈಯಲ್ಲಿ ಹಿಡಿದಿದ್ದ ಓಲೆಯನ್ನು ಮುಂದೆ ಚಾಚಿ ಹೇಳಿದರು.

“ ರೋಹಿಣೀ ! ನಿನ್ನ ಚಿಕ್ಕಮ್ಮನ ಮಗಳು– ಮಣಿಮಾಲೆ ನಿನಗೆ ಕಾಗದ ಬರೆದಿದ್ದಾಳೆ ನೋಡಮ್ಮಾ ! ”

ರೋಹಿಣಿ ಇಲ್ಲದ ಆತುರವನ್ನು ತಂದುಕೊಂಡು, ತಂದೆಯ ಕಡೆಯಿಂದ ಕಾಗದವನ್ನು ತೆಗೆದುಕೊಂಡಳು. ಮಗಳ ದೈನ್ಯಮುದ್ರೆಯ ಮುಖವನ್ನು ಬಹಳ ಹೊತ್ತು ನೋಡಲಾರದವರಾಗಿಯೊ ಏನೋ, ರೋಹಿಣಿಯ

ತಂದೆ ಕೂಡಲೆ ಅಲ್ಲಿಂದ ಹೊರಟು ನಡೆದರು. ರೋಹಿಣಿಯು ಮೂಕತನ ದಿಂದಲೆ ಕಾಗದವನ್ನು ಓದಲು ತೊಡಗಿದಳು.

“ ಅಕ್ಕಮ್ಮಾ!

ಇಲ್ಲಿ ಎಲ್ಲವೂ ಸೌಖ್ಯ. ನಿಮ್ಮ ಸೌಖ್ಯ ಆಗಾಗ ತಿಳಿಸುತ್ತಿರಬೇಕು. ಇಲ್ಲಿ ನಮ್ಮ ಮನೆ ಊರುಬಿಟ್ಟು ದೂರದಲ್ಲಿದೆ. ಮನೆಯಲ್ಲಿ ನಾವು ಇಬ್ಬರೇ ಇಬ್ಬರು. ನೆರೆಹೊರೆಯವರ ಪರಿಚಯವೂ ನನಗೆ ಹೆಚ್ಚಾಗಿಲ್ಲ. ಅವರು ಹೊರಕ್ಕೆ ಹೋದರೆಂದರೆ ಮನೆಯಲ್ಲಿ ನಾನು ಒಬ್ಬಳೆ ಇರಬೇಕಾಗುವುದು. ಮನೆಯಲ್ಲಿದ್ದರಾದರೂ ಏನಾಯಿತು ? ಬೇರೆ ಮಾತುಗಳಿಲ್ಲ ಕತೆಗಳಿಲ್ಲ. ಯಾವಾಗಲೂ ಕೈಯೊಳಗಿನ ಪುಸ್ತಕ ತಪ್ಪಿರುವುದಿಲ್ಲ. ಮಧ್ಯೆ ಮಧ್ಯೆ ನನಗೆ, ಏನೇನೋ ಹಾಡುಗಳನ್ನು ಕವಿತೆಗಳನ್ನು ಓದಿ ಹೇಳುವರು. ಅವುಗಳನ್ನು ತೆಗೆದುಕೊಂಡು ನಾನೇನು ಮಾಡಬೇಕಾಗಿದೆ? ನನ್ನೊಡನೆ ಮಾತನಾಡುವು ದಕ್ಕೆ ಯಾರಾದರೂ ಜೊತೆಗಾತಿಯರು ದೊರೆತಾರೋ ಇಲ್ಲವೋ! ಎನ್ನು ವಂತಾಗಿದೆ. ನನ್ನ ಮೇಲೆ ದಯೆಯಿಟ್ಟು ಕೆಲವು ದಿನ ಇಲ್ಲಿಗೆ ಬಂದು ಹೋದರೆ, ತುಂಬ ಉಪಕಾರವಾಗುವುದು. ಬಂದೇ ಬಿಡಬೇಕು.

ನಿನ್ನ ತಂಗಿ **ಮಣಿಮಾಲೆ**”

ಕಾಗದವನ್ನೋದುವುದಾದ ಮೇಲೆ ರೋಹಿಣಿಯು ಅದೆಷ್ಟೊ ವೇಳೆಯ ವರೆಗೆ ಧ್ಯಾನಸ್ಥಳಾಗಿ ಕುಳಿತುಬಿಟ್ಟಳು. ಆಗ ಅವಳು ತನ್ನ ಪ್ರೀತಿಯ ಮಣಿಮಾಲೆಯ ನೂತನ ಸಂಸಾರದ ನಾಟಕವನ್ನು ತನ್ನ ಆಂತರಿಕ ದೃಷ್ಟಿಗಳೆದುರು ಕಾಣುತ್ತಿದ್ದಳೇನೋ! ಆಶೆ, ಕಳವಳ, ಇಷ್ಟವಸ್ತುವು ದೊರೆತ ಸಮಾಧಾನ, ದೊರೆತುದು ಕಳೆದು ಹೋದ ವ್ಯಸನ, ಈ ಎಲ್ಲ ಭಾವಗಳು ಒಂದೊಂದಾಗಿ ರೋಹಿಣಿಯ ಮುಖದ ಮೇಲೆ ಎಡೆಯಾಡಿ ಹೋಗುತ್ತಿದ್ದುವು. ಕೊನೆಗೆ ತನ್ನೊಳಗೆ ತಾನೆ ಎಂದುಕೊಂಡಳು :

“ ಮಾಲೇ ! ನಿನಗೆ ಜೊತೆಗಾರರ ಕೊರತೆಯೇ ? ಇನ್ನಾರು ಏತಕ್ಕೆ ಬೇಕು ನಿನಗೆ ? ”

“ ನನ್ನ ಪ್ರಿತಿಯ ಮಣಿಮಾಲೆಯ ಸಂಸಾರ ಸೌಖ್ಯವನ್ನು ನನ್ನ ಕಣ್ಣಾರೆ ನೋಡುತ್ತೇನೆ; ಅದರಿಂದಲಾದರೂ ನನ್ನ ಮನಸ್ಸಿನ ಕಾತರವು ಕೊಂಚ ಕಡಿಮೆಯಾದೀತು ! ? ”

---

೨

ಮಣಿಮಾಲೆಗೆ ಜೊತೆಗಾತಿಯೊಬ್ಬಳು ದೊರೆತುದರಿಂದ, ಅವಳ ಬೇಸರವು ತೊಲಗಿ ಆನಂದದಿಂದ ದಿನಗಳು ಸಾಗುತ್ತಿದ್ದುವು. ಇಂದು ರೋಹಿಣಿ, ಮಣಿಮಾಲೆ ಮಾತನಾಡುತ್ತ ಕುಳಿತಿದ್ದರು.

" ಮಾಲೇ ! ನಿನ್ನ ಜೀವವು ಏಕನಾದದಂತಿದೆ ನೋಡು ! "

" ಎಂದರೆ ಏನವ್ವಾ ಹೀಗೆ ? "

" ವೀಣೆ ಸಿತಾರುಗಳಂತೆ ಅಲಂಕಾರವರ್ಣಗಳ ವೈವಿಧ್ಯವನ್ನು ಹೊರಡಿಸಿ, ನುಡಿಸುತ್ತಿರುವ ಗಾಯಕನಿಗೆ ಹೊಸ ಹೊಸ ಹುರುಪು ಒದವಿಸಲಿಕ್ಕೆ ನಿನ್ನಿಂದಾಗದು. ಯಾವಾಗಲೂ ನಿನ್ನ ಬದುಕು ಒಂದೇ ಬಗೆಯ ನಾದವನ್ನು ನುಡಿಯುತ್ತಿದೆ. "

" ಸ್ಪಷ್ಟವಾಗಿ ಹೇಳಬಾರದೇ ? ನಿನ್ನ ಮಾತು ನನಗೇನೂ ತಿಳಿಯದವ್ವಾ ! "

" ತಂಗೀ, ಸಂಸಾರದಲ್ಲಿ ಎಲ್ಲ ಬಗೆಯ ಅನುಕೂಲತೆಗಳು ದೊರೆಯುವುದೆಂದರೆ ಅಸಾಧ್ಯ ! ನಿನಗೆ ಯಾವುದರ ಕೊರತೆಯಿದೆ ನೋಡು ! ಏನಿದ್ದರೇನು, ನಿನ್ನ ಮಮತೆಯ ಮಂದಿರವನ್ನು ಕಾಡುಗಲ್ಲುಗಳಿಂದಲೆ ಕಟ್ಟುತ್ತೀಯೆ ! ಕುಸುರುಕುಸುರಿನ ಚಿತ್ರಶಿಲೆಗಳಿಂದ ಕಟ್ಟಲು ನಿನಗೆ ಬರುವುದೇ ಇಲ್ಲ."

" ಹಾಗಾದರೆ ನಾನೊಂದು ಒಗಟುಹೇಳುತ್ತೇನೆ.... ಒಡೆದು ಹೇಳು ! 'ಮರದೊಳಗೆ ಮರಹುಟ್ಟಿ ಮರಚಕ್ರಕಾಯಾಗಿ ತಿನಬಾರದ್ಹಣ್ಣು ಬಲು ಸವಿ."

" ಇದೇನೇ ಮಾಲಾ ! "

"ಅಹುದವ್ವಾ ! ನಿನ್ನ ಮಾತಿನ ಒಗಟು ನನಗೆ ತಿಳಿಯಲಿಲ್ಲ, ಅದಕ್ಕೆ ಪ್ರತಿಯಾಗಿ ನಾನೂ ಒಂದು ಒಗಟು ಹೇಳಿದೆ."

ರೋಹಿಣಿಯು ನಗುನಗುತ್ತ ನುಡಿದಳು :

" ಹುಚ್ಚುಹುಡುಗಿ ! ಯಾವಾಗಲೂ ಹುಡುಗಾಟ ನಿನ್ನದು. ಅಲ್ಲವೇ ಮಾಲಾ ! ' ನೀನು ರಸಿಕಳಾಗಬೇಕು– ಸೂಕ್ಷ್ಮಬುದ್ಧಿಯವಳಾಗಬೇಕು– ತನಗೆ ತಕ್ಕಜೊತೆಗಾತಿಯಾಗಬೇಕು ' ಎಂದು ನಿನ್ನ ಗಂಡನ ಆಶೆ

ಇದ್ದಂತೆ ತೋರುತ್ತಿದೆ. ನಿನಗೋ ಅದೇನೂ ಬೇಡ. ಊಟ, ಅಲಂಕಾರ, ಹಾಳುಹರಟೆ ಆದರೆ ಆಯಿತು."

"ರಸಿಕರು, ಸೂಕ್ಷ್ಮಬುದ್ಧಿಯವರು, ಎಂದರೆ ಏನದು? ಅವರಿಗೇನು ಮುಂದಲೆಯ ಮೇಲೆ ಕೊಂಬುಗಳಿರುವವೇನು? ನನಗೆ ಹೆಚ್ಚಿನದೇನೂ ಬೇಡ ನೋಡು; ಈಗ ಇದ್ದಂತೆಯೆ ಕಡೆತನಕ- ದೇವರು ಇಟ್ಟರೆ ಸಾಕು!"

ರೋಹಿಣಿಯು ಒಂದು ವಿಧವಾದ ನೋಟದಿಂದ ತಂಗಿಯನ್ನು ನೋಡಿದಳು. ಬಳಿಕ ದೈನ್ಯಭಾವದಿಂದ ಮೇಲಕ್ಕೆ ನಿಟ್ಟಿಸಿದಳು. ಕಳವಳದ ದನಿಯಲ್ಲಿ ಮಾತನಾಡಲು ತೊಡಗಿದಳು.

"ಮನೆಯಲ್ಲಿ ಒಳ್ಳೊಳ್ಳೆಯ ಪುಸ್ತಕಗಳು ಅದೆಷ್ಟೋ ಇವೆ. ಒಂದು ದಿನವಾದರೂ ನೀನು ಅವುಗಳನ್ನು ಕೈಯಲ್ಲಿ ಹಿಡಿಯುತ್ತೀಯಾ? ನಿನ್ನ ಗಂಡ ಓದುತಿರುವುದರ ಕಡೆಗೆ-ಹೇಳುತಿರುವುದರ ಕಡೆಗೆ ಕೊಂಚ ಲಕ್ಷ್ಯಕೊಟ್ಟರೆ ಸಾಕು. ನಿನ್ನ ಬುದ್ಧಿ ಎಷ್ಟೋ ಸಂಸ್ಕಾರಹೊಂದುತ್ತದೆ. ಅಷ್ಟನ್ನೂ ನೀನು ಮಾಡುವದಿಲ್ಲ."

"ನಮ್ಮ ಅಜ್ಜಿ ಇದ್ದಿಲ್ಲವೆ? ಆಕೆ ನನಗೆ ಮೇಲೆಮೇಲೆ ಹೇಳುತ್ತಿದ್ದಳು-ಹೆಂಗಸರು ಓದಿದರೆ, ಬರೆದರೆ, ಗಂಡಂದಿರ ಆಯುಃಷ್ಯ ಕಡಿಮೆಯಾಗುವುದು- ಎಂದು."

ರೋಹಿಣಿಯು ಮಾತನೇನೂ ಆಡಲಿಲ್ಲ. ಬೇಸರವಿಷಾದಗಳು ಬೆರೆತ ನಗೆಯೊಂದನ್ನು ನಕ್ಕಳು ಮಣಿಮಾಲೆಯ ಮಾತು ಅವಳ ಹೃದಯವನ್ನೊಂದು ಸಲ ಕಚ್ಚಿತು. "ನನಗೆ ಗಂಡನೆಂದರೆ ಏನೆಂಬುದು ಇನ್ನೂ ತಿಳಿಯದಿರುವಾಗಲೆ, ನನ್ನ ಗಂಡನ ಆಯುಷ್ಯ ಕಡಿದು ಹೋಯಿತಲ್ಲ!" ಎಂಬ ವಿಚಾರವು ರೋಹಿಣಿಯ ಮುಖದಿಂದ ಬಿಸಿಯುಸಿರೊಂದನ್ನು ಬಲವಂತದಿಂದ ಎಳೆದು ತಂದಿತು. ಮತ್ತೆ ಮಾತನಾಡಲು ಮೊದಲು ಮಾಡಿದಳು.

"ಓದುಬರೆಹ ಹೋಗಲಿ ಬಿಡು ತಂಗೀ! ಯಜಮಾನನ ಮನಸ್ಸಿನ ಒಲವನ್ನರಿತು ವರ್ತಿಸುವ ಬುದ್ಧಿಯನ್ನಾದರೂ ಹೆಚ್ಚಿಸಿಕೊಳ್ಳಬಾರದೇ ನೀನು?"

"ಹೇಗಮ್ಮಾ ಅದನ್ನು ಹೆಚ್ಚಿಸಿಕೊಳ್ಳುವುದು? ಯಾವ ಪಾಠಶಾಲೆಗೆ ಹೋಗಬೇಕು?"

"ಮಾಲಾ! ಅದಕ್ಕಾಗಿ ಯಾವ ಪಾಠಶಾಲೆಗೂ ಹೋಗಬೇಕಾ

ದುದಿಲ್ಲ. ಹೆಣ್ಣಿನ ಹೃದಯದಲ್ಲಿ ಪರಮಾತ್ಮನು ಅದನ್ನು ಮೀಸಲಾಗಿ ಇರಿಸಿದ್ದಾನೆ."

"ಹಾಗಾದರೆ ನಾನು ಹೆಣ್ಣಲ್ಲವೇ ?"

"ನೀನು ಹೆಣ್ಣೇನೋ ಅಹುದು. ಆದರೆ ಹೆಣ್ಣಿನ ಕಣ್ಣು ಇನ್ನೂ ತೆರೆದಿಲ್ಲ. ನಿನ್ನ ಮುಗ್ಧತೆಯು ಅದನ್ನು ಮುಚ್ಚಿಬಿಟ್ಟಿದೆ."

"ವಿಚಿತ್ರವಮ್ಮಾ ನಿನ್ನ ಮಾತು! ಈಗಿದ್ದ ಈ ನನ್ನ ಕಣ್ಣುಗಳು ಗಂಡಿನ ಕಣ್ಣುಗಳೇನು ?"

"ಗಂಡಿನವೂ ಅಲ್ಲ, ಹೆಣ್ಣಿನವೂ ಅಲ್ಲ. ಹೊರಗಿನ ವಸ್ತುಗಳನ್ನು ಮಾತ್ರ ಮೂಡಿಸಿ ತೋರಿಸುವ ಗಾಜಿನ ತುಂಡುಗಳವು."

ರತ್ನಾಕರನು — ಮಣಿಮಾಲೆಯ ಗಂಡ— ಸಮೀಪದಲ್ಲಿಯೆ ಇದ್ದು ಕಿವಿಗೊಟ್ಟಂತೆ ಕೇಳಿಸಿತು. ಇಬ್ಬರ ಮಾತುಗಳೂ ನಿಂತುವು.

ರೋಹಿಣಿಯು ಪಿಸುಮಾತಿನಲ್ಲಿ ಹೇಳಿದಳು.

"ಚಹಾ ಆಗಿದೆಯೇನು ನೋಡು ! ನೀನೇ ತೆಗೆದುಕೊಂಡು ಹೋಗಿ ಕೊಡು! ಅಡಿಗೆಯವನಿಗೆ ಹೇಳಿ ಬಿಡಬೇಡ."

೩

ರತ್ನಾಕರನು ತನ್ನ ದಿವಾಣಖಾನೆಯಲ್ಲಿ, ದಿಂಬಿಗೆ ಒರಗಿ ಬಿದ್ದುಕೊಂಡಿದ್ದಾನೆ. ಬಳಿಯಲ್ಲಿಯೆ ಒಂದೆರಡು ಪುಸ್ತಕಗಳು ಬಿದ್ದಿವೆ. ಆತನ ಮನಸ್ಸು ಅನೇಕ ಆಲೋಚನಾತರಂಗಗಳನ್ನು ಬೆನ್ನಟ್ಟಿ ನಡೆದಿದೆ.

"ಮಣಿಮಾಲೆ ಕುರೂಪಿಯೇ ? ಅಲ್ಲ....! ಅವಳ ಸುಸ್ವರೂಪವನ್ನು ನೋಡಿಯೆ ಮೆಚ್ಚಿ ಕೈಹಿಡಿದೆ. ಆಕೆ ದುಷ್ಟಳೆನ್ನಲೆ! ಛೀ! ಎಳೆಗೂಸಿನಂತಹ ಮನಸ್ಸು. ಆದರೇನು....! ಆಕೆಯ ಒಡನಾಟದಿಂದ ನನ್ನ ಜೀವನಕ್ಕೆ ತೃಪ್ತಿ ಇಲ್ಲ, ಪೂರ್ಣತೆಯಿಲ್ಲ; ಏತಕ್ಕೆ ಹೀಗೆ ಇರಬಹುದು....? ಸರಿ! ಮೊನ್ನೆ ರೋಹಿಣಿ ಮಣಿಮಾಲೆಗೆ ಹೇಳುತ್ತಿದ್ದಳಲ್ಲವೇ— ನಿನ್ನಲ್ಲಿ ಹೆಣ್ಣಿನಕಣ್ಣು ಇನ್ನೂ ತೆರೆದಿಲ್ಲವೆಂದು! ಎಷ್ಟು ಸರಿಯಾದ ಮಾತದು! ನನ್ನ ಮನದ ಒಲವನ್ನರಿತು ನಡೆಯುವುದು ಮಣಿಮಾಲೆಗೆ ಸಾಧ್ಯವಿಲ್ಲ; ಬಾಯಿಬಿಚ್ಚಿ ಸ್ಪಷ್ಟವಾಗಿ ಹೇಳಿ ನಡೆಯಿಸಿಕೊಳ್ಳುವುದಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲ. ಒಂದಕ್ಕೊಂದು ವಿರೋಧವಾಗಿರುವ ಶಕ್ತಿಗಳನ್ನು ಜೊತೆಗೂಡಿಸಿ ಹೃದಯ

ದಲ್ಲಿ ಇಲ್ಲದ ಜಗಳಗಳನ್ನೆಬ್ಬಿಸಿ, ವಿಧಿಯು ತಮಾಷೆನೋಡುತ್ತಿರುವನು."

* * * *

"ರೋಹಿಣಿಯ ಸಂಸಾರವು ಅನುಕೂಲವಾಗಿದ್ದರೆ ಅವಳ ಒಡನಾಡಿಯು ಅದೆಷ್ಟು ಆನಂದದಿಂದಿರಬಹುದಾಗಿದ್ದಿತು? ಅಹಹ! ಅವಳ ಅನುಭವದ ಘನತೆಯೆಷ್ಟು! ಬುದ್ಧಿಯ ವೈಭವವೆಂತಹದು! ಮನಸ್ಸಿನ ಸಂಸ್ಕಾರವೆಂತಹದು! ಎಲ್ಲವೂ ಆಯಿತು, ಆದರೇನು! ಅವಳ ಜೀವನವೂ ಅಪೂರ್ಣವೇ! ಅಪೌರುಷೇಯವೆಂದು ಹೇಳಿಸಿಕೊಳ್ಳುವ ಶ್ರುತಿಯು 'ಪೂರ್ಣಾತ್ ಪೂರ್ಣಮುದಚ್ಯತೆ' ಪೂರ್ಣದಿಂದ ಪೂರ್ಣದ ಉತ್ಪತ್ತಿಯಾಗುವದು– ಎಂದು ಹೇಳುವುದು. ನನ್ನ ಬದುಕೂ ರೋಹಿಣಿಯ ಬದುಕೂ ಏತಕ್ಕಾಗಿ ಅಪೂರ್ಣವಾಗಿರಬಹುದು? ನಮ್ಮಿಬ್ಬರನ್ನು ಹುಟ್ಟಿಸಿದ ಅಪೂರ್ಣಪರಮಾತ್ಮನೊಬ್ಬನು ಬೇರೆಯಾಗಿರಬಹುದೇನು? ಛೆ! ನನ್ನ ಹುಚ್ಚುತನವಿದು! ಪರಮಾತ್ಮನು ಒಬ್ಬನೇ ಒಬ್ಬ; ಆತನು ನಿತ್ಯಪೂರ್ಣನು. ಅವನ ಪೂರ್ಣತೆಗೆ ಚ್ಯುತಿಯೆಲ್ಲಿಯದು?"

* * * *

"ಮನೆಯಲ್ಲಿ ಓರಣವು ನೆಲೆಯೂರಿ ನಿಂತಿದೆಯೀಗ. ಮಣಿಮಾಲೆಗೆ ತನ್ನ ಮೈಯ ಓರಣವಷ್ಟೆ ಗೊತ್ತು. ಮನೆಯ ಓರಣವನ್ನೂ ಮನದ ಓರಣವನ್ನೂ ಕೇಳಲೆ ಕೂಡದು. ನನ್ನ ಗ್ರಂಥಸಂಗ್ರಹವನ್ನು ನೋಡಿದರೆ ಎಲ್ಲಿಯ ಪುಸ್ತಕವಲ್ಲಿ ಇದ್ದೇ ಇರುವದು. ಮೇಜು ಕುರ್ಚಿಗಳ ಮೇಲೆ ಧೂಳಿ ಮುಸುಕಿದುದನ್ನು, ಇತ್ತೀಚೆಗೆ ನಾನು ಒಂದುಸಲವೂ ಕಂಡಿಲ್ಲ. ಪುಷ್ಪಪಾತ್ರೆಯಲ್ಲಿ ಸೇರಿಸಿಡುವ ಪುಷ್ಪಪತ್ರಗಳ ಗುಚ್ಛವು ಎಷ್ಟೊಂದು ಚಾತುರ್ಯದಿಂದ ಮಾಡಿದ್ದಾಗಿರುತ್ತದೆ! ನನಗೆ ಏನಾದರೂ ಬೇಕೆಂಬ ಮಾತು ಮನದಲ್ಲಿ ಮೂಡುಮೂಡುತಿರುವಾಗಲೆ, ಅದು ಮುಂದೆ ಬಂದು ಸಿದ್ಧವಾಗಿ ನಿಂತಿರುವುದು. ಅಹಹ! ರೋಹಿಣಿಯೇ ಮಣಿಮಾಲೆಯಾಗಿ ಹುಟ್ಟಿದ್ದರೆ ಎಷ್ಟು ಚೆನ್ನಾಗುತ್ತಿದ್ದಿತು...!"

* * * *

"ಮೊನ್ನೆ ನಡೆದ ಸಂಗತಿಯು ನೆನಪಾದರೆ, ಮೈ ಜುಮ್ಮೆಂದು ನವಿರು ನಿಮಿರಿ ನಿಲ್ಲುವುದು. ಅಂದು ಐದುಗಂಟೆಗೆ ಮನೆಗೆ ಬರುವೆನೆಂದು ಹೇಳಿದವನು, ಮೂರುಗಂಟೆಗೇ ಮನೆಗೆ ಬಂದುಬಿಟ್ಟೆ. ಮನೆಯಲ್ಲಿ ಯಾರ

ಸುಳಿವೂ ಕಾಣಲಿಲ್ಲ. ಮಣಿಮಾಲೆ ಮಲಗಿಕೊಂಡಿರಬಹುದೆಂದು ಅವಳ ಕಿರುಮನೆಗೆ ಹೋದೆ. ಗೋಡೆಯ ಕಡೆಗೆ ಮುಖ ಹೊರಳಿಸಿ ಮಲಗಿದುದು ಕಂಡಿತು. ವಿನೋದಮಾಡಬೇಕೆಂದು ಆತುರದಿಂದ ಹೋಗಿ, ತೀರ ಅವಳ ಬಳಿಯಲ್ಲಿ ಕುಳಿತೆ. ಇನ್ನು ಮೈಮುಟ್ಟಿ ಅಲುಗಿಸುವವನು. ಬಳಲಿದ ಮುಡಿಯನ್ನು ಕಂಡು, ಅವಳು ರೋಹಿಣಿಯೆಂಬುದನ್ನು ಅರಿತುಕೊಂಡೆ; ಬೆಚ್ಚಿ ಹಿಂದಕ್ಕೆ ಸರಿದೆ. ಆದರೆ ಅವಳನ್ನು ಚೆನ್ನಾಗಿ ನೋಡಿಕೊಳ್ಳದೆ ಅಲ್ಲಿಂದ ಹೊರಟು ಹೋಗುವುದಕ್ಕೆ ಕಣ್ಣುಗಳು ಸಮ್ಮತಿಸಲಿಲ್ಲ. ಮರುಳನಂತೆ ನಿಂತು ನೋಡಿಯೇ ನೋಡಿದೆ. ರೋಹಿಣಿಯು ಮಣಿಮಾಲೆಯಷ್ಟು ರೂಪವತಿಯಲ್ಲವಾದರೂ ನನಗೆ ಅವಳು ಅಂದು ಎಷ್ಟೊಂದು ಚೆಲುವೆಯಾಗಿ ಕಂಡಳಲ್ಲ.... ! ದೇವಾ ! ರೋಹಿಣಿಯ ಕೈಹಿಡಿಯುವ ಯೋಗವನ್ನು ನನಗೆ ತಂದುಕೊಟ್ಟಿದ್ದರೆ ನಿನ್ನನ್ನೇನು ಬೈಯುತ್ತಿದ್ದೆನೇ ? ”

* * * *

“ ರೋಹಿಣಿಯ ಸಾಹಿತ್ಯ ಸಂಸ್ಕಾರವು ಬಲು ಹೆಚ್ಚಿನದು. ಅವಳು ಒಂದುದಿನ ಮಣಿಮಾಲೆಯೆದುರಿಗೆ, ನನ್ನದೊಂದು ಕವನವನ್ನೋದಿ ಅರ್ಥ ಮಾಡಿ ಹೇಳುತ್ತಿರುವುದನ್ನು ಕೇಳಿದೆ. ನನ್ನ ಭಾವವನ್ನು ಎಷ್ಟು ಸುಂದರವಾಗಿ ಸ್ಪಷ್ಟಗೊಳಿಸಿದಳವಳು ! ನನಗೆ ಕೂಡ ಮಾತಿನಲ್ಲಿ ಅಷ್ಟು ಚೆನ್ನಾಗಿ ಹೇಳಲಿಕ್ಕೆ ಬರದು. ನಾನು ಕವಿತೆಗಳನ್ನು ಓದಿ ಹೇಳಿದಾಗೆಲ್ಲ ಮುಖ ಮುದುಡಿಸುತ್ತಿದ್ದ ಮಣಿಮಾಲೆಯು, ರೋಹಿಣಿಯು ಹೇಳುವುದನ್ನು ಅದೆಷ್ಟು ಆನಂದದಿಂದ ಕೇಳಿಕೊಳ್ಳುತ್ತಿದ್ದಳು ! ರೋಹಿಣಿಯು ಕವಿತೆಗಳನ್ನು ರಚಿಸಲೂ ಬಲ್ಲಳೆಂದು ಮಣಿಮಾಲೆ ಹೇಳಿದಳು. ನೋಡಬೇಕು—ನಾನೊಮ್ಮೆ ಆ ಕವಿತೆಗಳನ್ನು; ಮಣಿಮಾಲೆಗೆ ಹೇಳಿ ತರಿಸಿಕೊಳ್ಳಬೇಕು. ನನಗೆ ಒಂದೊಂದು ಸಲ ಹೀಗೆಯೂ ಎನಿಸುತ್ತದೆ—ವಿಧಾತನು ತನ್ನ ಜೀವನದ ಪರಿಪೂರ್ಣತೆಗಾಗಿಯೇ ರೋಹಿಣಿಯನ್ನು ಹುಟ್ಟಿಸಿರಬಹುದೇನು ?—ಎಂದು.”

ಮನೆಯ ಆಳಿನೊಂದಿಗೆ ಮಣಿಮಾಲೆಯು ಏನನ್ನೋ ಕೂಗಿ ಕೂಗಿ ಮಾತನಾಡಲು ತೊಡಗಿದುದರಿಂದ, ರತ್ನಾಕರನ ಯೋಚನಾಪ್ರವಾಹಕ್ಕೆ ಅಡ್ಡಿಯೊದಗಿತು.

---

೪

ಮನೆಯನ್ನೆಲ್ಲ ಓರಣಗೊಳಿಸುತ್ತ, ರೋಹಿಣಿಯು ರತ್ನಾಕರನ ಕಿರು ಮನೆಯೊಳಕ್ಕೆ ಬಂದಳು. ಮೇಜಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದು ಕೊಂಡಿದ್ದ ಪುಸ್ತಕಗಳನ್ನು ಅಲ್ಲಿಯೇ ಇದ್ದ ಪುಸ್ತಕಪೀಠದ ಮೇಲೆ ವ್ಯವಸ್ಥಿತವಾಗಿ ಹೊಂದಿಸಿ ಇರಿಸಿದಳು. ಹುಡಿಯು ಎದ್ದಂತೆ ಯಾವ ಭಾಗವೂ ಕಾಣದಿದ್ದರೂ, ಅಲ್ಲಿದ್ದ ಮೇಜು, ಕುರ್ಚಿ, ಕಪಾಟು, ಪೆಟ್ಟಿಗೆ, ಚಪ್ಪರಮಂಚ ಮೊದಲಾದವುಗಳನ್ನೆಲ್ಲ ಬಟ್ಟೆಯಿಂದ ಕೊಡಹಿದಳು. ಬಳಿಕ ಒಂದೊಂದಾಗಿ ಅಲ್ಲಿದ್ದ ಚಿತ್ರಪಟ, ಕನ್ನಡಿಗಳನ್ನು ಹಸನಾಗಿ ಒರಸಿದಳು. ಕೊನೆಗೆ ರತ್ನಾಕರನ ಛಾಯಾಚಿತ್ರವನ್ನೊಂದನ್ನು ಕೈಯಲ್ಲಿ ತೆಗೆದುಕೊಂಡು– ಭಾವಿಕನಾದ ಅರ್ಚಕನು ಪೂಜೆಯ ಪ್ರತಿಮೆಯನ್ನು ಭಕ್ತಿಯಿಂದ ಒರಸುವಂತೆ– ತನ್ನ ಸೀರೆಯ ಸೆರಗಿನಿಂದ ಅದನ್ನು ಮೆಲ್ಲಗೆ ಒರಸಿದಳು. ಆ ಮೇಲೆ ತನ್ನ ಎರಡೂ ಕೈಗಳಿಂದಲೂ ಅದನ್ನು ಕಣ್ಣೆದುರಿಗೆ ಹಿಡಿದುಕೊಂಡು, ಸ್ಥಿರದೃಷ್ಟಿಯಿಂದ ನೋಡಲು ತೊಡಗಿದಳು. ಪಟದಲ್ಲಿದ್ದ ರತ್ನಾಕರನ ಚಿತ್ರವು ತನ್ನನ್ನೇ ನಿಟ್ಟಿಸಿ ನೋಡುತ್ತಿರುವಂತೆ ಕಾಣಲು ರೋಹಿಣಿಯು, ಮೈಯಲ್ಲೆಲ್ಲ ವಿದ್ಯುತ್‌ಪ್ರವಾಹವು ಹರಿದಾಡಿದ ಅನುಭವವನ್ನು ಹೊಂದಿದಳು. ಆಗ ಆಕೆಯ ಕಣ್ಣುಗಳಿಂದ ಹೊರಡುವ ಕಿರಣಗಳೆಲ್ಲ ಬರೀ ಆಶಾಭಾವವೊಂದನ್ನೇ ಹೊರಕ್ಕೆ ಹಾಕುತ್ತಿದ್ದುವು.

ಆರೇಳು ನಿಮಿಷಗಳಾದ ಮೇಲೆ ರೋಹಿಣಿ ಚಿತ್ರಪಟವನ್ನು ಅದರ ಸ್ಥಳದಲ್ಲಿರಿಸಿದಳು. ಪುಷ್ಪಪಾತ್ರೆಯಲ್ಲಿ ಇರಿಸಲಿಕ್ಕೆಂದು ತಾನಂದು ಕಟ್ಟಿ ತಂದಿದ್ದ ಪುಷ್ಪಮಂಜರಿಯನ್ನು– ಇದರ ಮೇಲೆ ಇರಿಸಿದರೆ ಹೇಗೆ ಕಾಣುವುದು? ಎಂಬ ಭಾವನೆಯಿಂದಲೋ ಏನೋ– ರತ್ನಾಕರನ ಚಿತ್ರಪಟದ ತಲೆಯ ಮೇಲೆ ಇಟ್ಟು ನೋಡಿದಳು. ನೋಡಿಯೇ ನೋಡಿದಳು. ತರುವಾಯ ಆ ಮಂಜರಿಯನ್ನು ಕೈಗೆ ತೆಗೆದುಕೊಂಡು, ಮೇಜಿನ ಮೇಲಿದ್ದ ಪಾತ್ರೆಯಲ್ಲಿ ಸೇರಿಸಿಟ್ಟಳು. ಆ ಮೇಲೆ ರತ್ನಾಕರನು ಕೂಡುತ್ತಿದ್ದ ಕುರ್ಚಿಗೆ ಎದುರಾಗಿದ್ದ– ಮಣಿಮಾಲೆಯು ಕುಳಿತುಕೊಳ್ಳುವ– ಕುರ್ಚಿಯ ಮೇಲೆ ಕುಳಿತು, ರತ್ನಾಕರನ ಚಿತ್ರದಲ್ಲಿ ದೃಷ್ಟಿಯನ್ನು ನಿಲ್ಲಿಸಿದಳು. ಆಗ ಅವಳ ಮನಸ್ಸು ಅನೇಕ ವಿಚಾರಗಳಿಗೆ ಯಾತ್ರಾಸ್ಥಳವಾಗಿದ್ದಿತು.

"ರತ್ನಾಕರನು ಕುಲರಸಿಕ; ಮಣಿಮಾಲೆಯು ತಂದೆತಾಯಿಗಳ ಮುದ್ದಿನಲ್ಲಿ ಬಳೆದ ಮೊದ್ದು ಹುಡುಗಿ. ನಿಜವಾಗಿಯೂ ರತ್ನಾಕರನಿಗೆ ಸಂಸಾರದಲ್ಲಿ ಸೌಖ್ಯವಿದ್ದಂತೆ ಕಾಣೆ. ಆತನು ತನ್ನ ಅತೃಪ್ತಮನವನ್ನು ತನ್ನ ಅನೇಕ ಕವನಗಳಲ್ಲಿ ಪಡಿಮೂಡಿಸಿದ್ದಾನೆ. ತನ್ನ ಒಲವು ಬಯಸುವ ಆದರ್ಶರಮಣಿಯ ಪ್ರತಿಮೆಯನ್ನು ಅದೆಷ್ಟೊ ಕಡೆಗಳಲ್ಲಿ ಎರಕಹೊಯ್ದಿದ್ದಾನೆ. ಅಯ್ಯೋ! ರತ್ನಾಕರನಂತಹ ಪುರುಷವರನೂ ಅತೃಪ್ತಮನದಿಂದ ನಿಡುಸುಯ್ಯುತ್ತ ಬದುಕನ್ನು ನೂಕಬೇಕೇ?"

* * * *

"ಅದೇನೋ, ನನ್ನ ಮನಸ್ಸು ಇತ್ತೀಚೆಗೆ ತೀರ ಅಸ್ಥಿರವಾಗುತ್ತ ನಡೆದಿದೆ. ರತ್ನಾಕರನನ್ನು ನೋಡುವುದಕ್ಕೆ ನನಗೆ ನಾಚಿಕೆಯೆನಿಸುವುದು. ಅವನೊಡನೆ ಮಾತನಾಡುವುದಕ್ಕೆ ಭೀತಿಯೆನಿಸುವುದು. ಆದರೆ ಅವನನ್ನು ನೋಡಬೇಕೆಂಬ, ಯಾವಾಗಲೂ ಅವನೊಡನೆ ಮಾತನಾಡಬೇಕೆಂಬ ತವಕವು ಅಂಗಾಂಗಗಳಲ್ಲಿಯೂ ಉಯ್ಯಾಲೆಯಾಡುತ್ತಿರುವುದು. ನಾನು ಮಣಿಮಾಲೆಗೆ ಮೋಸವನ್ನೇನೂ ಮಾಡುತ್ತಿಲ್ಲವಷ್ಟೇ! ಮಣಿಮಾಲೆ ನನ್ನ ಸಲುಗೆಯ ತಂಗಿ. ಆಕೆಯ ಸಂಸಾರವು ಸುಸೂತ್ರವಾಗಿ ನಡೆಯುವಂತೆ ಮಾಡಿ, ನಾನು ಸಮಾಧಾನವನ್ನು ಪಡೆಯಬೇಕು; ನನ್ನ ಜೀವನವನ್ನು ಕೃತಾರ್ಥಗೊಳಿಸಬೇಕು."

* * * *

ರತ್ನಾಕರ ಮಣಿಮಾಲೆಯರು ಇಲ್ಲಿಯೆ ಎದುರೆದುರಾಗಿ ಕುರ್ಚಿಗಳ ಮೇಲೆ ಕುಳಿತುದನ್ನು ರೋಹಿಣಿಯು ಅನೇಕಸಲ ನೋಡಿದ್ದಳು. ಈಗ ಅವಳಿಗೊಂದು ಬಗೆಯ ತಲ್ಲೀನತೆ. ಆ ತಲ್ಲೀನತೆಯಲ್ಲಿ ಕಣಸೊಂದನ್ನು ಕಂಡಳು. ತಾನು ಮಣಿಮಾಲೆಯ ಕುರ್ಚಿಯ ಮೇಲೆ ಕುಳಿತಿದ್ದಂತೆಯೆ, ತನಗೆದುರಾಗಿದ್ದ ಕುರ್ಚಿಯ ಮೇಲೆ, ರತ್ನಾಕರನು ಮೆಲುನಗೆಯ ಮೊಗದಿಂದ ತನ್ನತ್ತಕಡೆಗೆ ನೋಡುತ್ತ ಕುಳಿತಿದ್ದಾನೆ. ತಾನು ರತ್ನಾಕರನೊಡನೆ ಮಾತನಾಡಬೇಕೆಂದಿರುವಾಗಲೆ ಅವನ ಚಿತ್ರ ಮರೆಯಾಗಿ, ಮಣಿಮಾಲೆಯ ಮುಗ್ಧಭಾವದ ಮುಖವು ಮುಂದೆ ಬಂದುನಿಂತಿದೆ. ರೋಹಿಣಿ ಬೆಚ್ಚಿಬಿದ್ದಳು. ನಸುವೇಳೆ ಅಪ್ರತಿಭಳಂತೆ ಕುಳಿತಿದ್ದು ಮತ್ತೆ ಯೋಚನೆಯ ಬೆನ್ನುಹತ್ತಿದಳು.

"ರತ್ನಾಕರನು ನನ್ನನ್ನು ನೋಡುವ ನೋಟದಲ್ಲಿ ದಿನದಿನಕ್ಕೂ ನನಗೆ ಹೊಸತನವು ಕಾಣುತ್ತಿದೆ. ಅವನ ನೋಟ ನನ್ನ ಕಡೆಗೆ ಬಿದ್ದಾಗ ಲೆಲ್ಲ 'ನನ್ನ ಮಣಿಮಾಲೆಯ ಸುಖಸರಸಿಯಲ್ಲಿ ನಾನೆಲ್ಲಿ ಮಣ್ಣುಗೂಡಿಸು ತ್ತೇನೋ!' ಎಂದು ಎದೆಯು ನಡುಗುವುದು. ಅಷ್ಟರಲ್ಲಿಯೆ ಹೃದಯದ ಇನ್ನೊಂದು ಯಾವುದೋ ಪದರು 'ಆ ನೋಟದ ಹೊಸತನವು ಯಾವಾ ಗಲೂ ದೊರೆಯಬಾರದೇ?' ಎಂದು ಹಂಬಲಿಸುವುದು. ನನ್ನ ಅಂತರಂಗ ದಲ್ಲಿ ಮಲ್ಲಗಾಳಿಗವು ನಡೆದಂತೆ ಎನಿಸುತ್ತಿದೆ. ಏನೇ ಆಗಲಿ, ಒಳ್ಳೆಯ ಹಾದಿ ಯಲ್ಲಿಯೆ ನಡೆಯುವ ಮನಸ್ಸಿನ ಗಟ್ಟಿತನವನ್ನು ಮಾತ್ರ, ನನಗೆ ದೇವರು ಕೊಡಬೇಕು."

* * * *

"ನಾನಿಲ್ಲಿ ಮಣಿಮಾಲೆಯ ಆಸನದಲ್ಲಿ ಕುಳಿತಿರುವುದು ಯುಕ್ತ ವಾದುದೇ? ಬೇಡ! ನನಗೆ ಮಣಿಮಾಲೆಯ ಯಾವ ಆಸನವೂ ಬೇಡ! ಅವಳ ಯಾವ ಪದಾರ್ಥಗಳನ್ನೂ ಸ್ಪರ್ಶಿಸಲಿಕ್ಕೆ ನನಗೆ ಅಧಿಕಾರವಿಲ್ಲ!"

* * * *

ಕುಳಿತಿದ್ದ ಕುರ್ಚಿಯನ್ನು ಬಿಟ್ಟು, ರೋಹಿಣಿಯು ದಿಗ್ಗನೆ ಎದ್ದು ನಿಂತಳು. ಮತ್ತೆ ಎದುರಾಗಿದ್ದ ಪಟದಲ್ಲಿ ಕಣ್ಣುಗಳನ್ನು ಕೀಲಿಸಿ, ನೋಡ ನೋಡುತ್ತಿರುವಾಗಲೆ ನಿಧಾನವಾಗಿ ಅಲ್ಲಿಯೇ ಕುಳಿತುಬಿಟ್ಟಳು. ಮರ ತಲೆಯಲ್ಲಿ ಯೋಚನೆಗಳ ಅಲೆದಾಟ.

"ಮಣಿಮಾಲೆಯು ನನ್ನ ಕವಿತೆಗಳ ಪುಸ್ತಕವನ್ನು ರತ್ನಾಕರನಿ ಕೊಟ್ಟಿರಬಹುದು. ನನ್ನ ಯಾವ ಯಾವ ಕವನಗಳು ಆತನಿಗೆ ಮೆಚ್ಚಿ ಯಾಗಿರಬಹುದೋ! ಆತನ ಅಭಿಪ್ರಾಯವು ನನಗೆ ತಿಳಿಯುವ ಬ ಯೆಂತು?"

ಒಮ್ಮೆಲೆ ರತ್ನಾಕರನು ಕಿರುಮನೆಯೊಳಕ್ಕೆ ಬಂದ. ರೋಹಿಣಿಯ ಬೆದರಿ ಬಿದ್ದವಳಾಗಿ, ತಟ್ಟನೆ ಎದ್ದು ಹೊರಕ್ಕೆ ನಡೆದಳು. ಬಾಗಿಲು ದಾಟ ತ್ತಿರುವಾಗ, ಬೇಡಬೇಡವೆಂದರೂ ಕೇಳದೆ ರೋಹಿಣಿಯ ಕಣ್ಣು ಹಿಂದಿರು ನೋಡಿದವು. ಆಗ ರತ್ನಾಕರನ ಕಣ್ಣು ಚಿತ್ರವಿಮರ್ಶಕನ ಕಣ್ಣುಗಳಂ ರೋಹಿಣಿಯಲ್ಲಿ ನೆಟ್ಟು ನಿಂತಿದ್ದವು. ಆ ಕಣ್ಣುಗಳಿಗೆ ರೋಹಿಣಿಯ ಅಂತರಂ ವನ್ನು ಅರಿತುಕೊಳ್ಳಬೇಕೆಂಬ ಆಕಾಂಕ್ಷೆಯುಂಟಾದಂತೆ ಕಾಣುತ್ತಿದ್ದಿತ

---

೫

ಮರುದಿನ ರವಿವಾರ; ಊಟವಾದೊಡನೆಯೆ ಕಿರುಮನೆಯನ್ನು ಸೇರಿದ್ದ ರತ್ನಾಕರನು, ನಾಲ್ಕುಗಂಟೆಯಾದರೂ ಹೊರಕ್ಕೆ ಹಣೆಯಿಕ್ಕಿರಲಿಲ್ಲ. ಮಣಿಮಾಲೆಯು ಇಳಿಹೊತ್ತಿನ ತಿಂಡಿತೀರ್ಥಗಳನ್ನು ಆತನಿಗೆ ಒದಗಿಸಿ ಕೊಟ್ಟು ಮರಳಿ ಬಂದಾಗ, ರೋಹಿಣಿಯು ನಡುಮನೆಯಲ್ಲಿ ಕುಳಿತು, ರಂಗವಲ್ಲಿಯ ಸುಳಿವುಗಳನ್ನು ಬಿಡಿಸುತ್ತಿದ್ದಳು. ಮಣಿಮಾಲೆಯು ಬಂದು ಉತ್ಸಾಹದ ಧ್ವನಿಯಲ್ಲಿ ಹೇಳಿದಳು—

"ನಿನ್ನ ಕವಿತೆಗಳೇನು ಮಾಟದ ಮಂತ್ರಗಳೇನಮ್ಮಾ? ಬೆಳಗಿನಿಂದಲೂ ನಿನ್ನ ಪುಸ್ತಕವನ್ನು ಕೈಯಿಂದ ಕೆಳಕ್ಕೆ ಇಟ್ಟಿಲ್ಲ. ಈಗ ನಾನು ಅಲ್ಲಿಗೆ ಹೋಗಿದ್ದಾಗ ನಿನ್ನ ಕವಿತೆಗಳನ್ನು ಎಷ್ಟೆಷ್ಟೋ ಹೊಗಳುವುದಾಯಿತು. ಆ 'ವನಮಲ್ಲಿಕೆ' ಎಂಬ ಕವನವನ್ನಂತೂ ಎಷ್ಟು ಸಲ ಓದಿದರೂ ಸಾಕಾಗಲಿಲ್ಲವಂತೆ."

ತಮ್ಮ ಕವಿತೆಗಳ ಹೊಗಳಿಕೆಯನ್ನು ಕೇಳಿ ಹಿಗ್ಗದಿರುವ ಸ್ಥಿತಪ್ರಜ್ಞರು ಯಾರಾದರೂ ಇರುವರೇ? ರೋಹಿಣಿಯು ಮಾತನೇನೂ ಆಡದೆ, ಹೃದಯದ ಹಿಗ್ಗನ್ನು ಮೆಲುನಗೆಯ ಮುಖಾಂತರ ಹೊರಕ್ಕೆ ತೋರಿಸುತ್ತ, ಕೃತಾರ್ಥಭಾವದಿಂದ ಮಣಿಮಾಲೆಯನ್ನು ನೋಡಲು ತೊಡಗಿದಳು. ಮಣಿಮಾಲೆಯೆ ಮತ್ತೆ ಮಾತನಾಡಿದಳು—

"ಇಂದೆಯೇ ತಾವೊಂದು ಹೊಸ ಕವನ ಬರೆದಿದ್ದಾರಂತೆ. ಅದನ್ನು ನಿನಗೆ ತೋರಿಸುವುದಕ್ಕಾಗಿ ನನ್ನ ಕಡೆಗೆ ಕೊಟ್ಟಿದ್ದಾರೆ."

ರೋಹಿಣಿಯು ತವಕದಿಂದ ಕೇಳಿದಳು—

"ಎಲ್ಲಿ ನೋಡೋಣ!"

ಮಣಿಮಾಲೆಯು ಮಡಿಲೊಳಗಿಂದ ಕಾಗದವೊಂದನ್ನು ತೆಗೆದು ಕೊಟ್ಟಳು. ರೋಹಿಣಿಯು ಕೈಯಲ್ಲಿದ್ದ ಕೆಲಸವನ್ನು ಅಷ್ಟಕ್ಕೇ ಬಿಟ್ಟು, ಅತ್ಯಾದರದಿಂದ ಕಾಗದವನ್ನು ಕೈಯಲ್ಲಿ ತೆಗೆದುಕೊಂಡು, ಅದರಲ್ಲಿ ಬರೆದಿದ್ದ ಕವಿತೆಯನ್ನು ನೋಡಲಾರಂಭಿಸಿದಳು.

ಆ ಕವಿತೆ ಹೀಗಿದ್ದಿತು:—

## ಮಾಲೆಗಾರ:—

೧

ಅರಸಿಯರಸಿದೆನು ನಾನು
ಹುರುಳುಳ್ಳ ಹೂವೊಂದನು,
ಮುರುಕುಗುಡಿಸಿಲನು ಸಹ
ಅರಮನೆಯೊಲಾಗಿಸುವ
ಸುರಪಾರಿಜಾತವನು.

೨

ಹೊರಗಿನಾ ಹೊಳಪ ಕಂಡೆ,
ಮರುಳನಾ ಬೆರಗುಗೊಂಡೆ;
ಸುರಲೋಕದರಳೆಂದೆ,
ಬರಿದೆ ಮೋಸಕೆ ಬಿದ್ದೆ,
ಸುಧೆಯೆಂದು ಸುರೆಯನುಂಡೆ.

೩

ರಾಯದೋಟಗಳ ಬಿಟ್ಟು
ಸುತ್ತು ಮುಳ್ಬೇಲಿಯಿಟ್ಟು
ಅಡವಿಯೊಳಗಡಗಿದ್ದ
ಬಿಡಗಿನಲರನು ನೋಡಿ,
ನಿಂತೆ ಕಣ್ಮನವ ಕೊಟ್ಟು

೪

ಬನದ ಹೂವಾದರೇನು!
ಎನಿಪೆ ನಿನ್ನಿಂದಮರನು!
ಧನಬೇಡ ಧರೆಬೇಡ,
ಜನಬೇಡ ಜೊತೆಬೇಡ,
ಮನ ಬೇಡುವುದು ನಿನ್ನನು.

೫

ಮುಳ್ಳುಗಳ ಕೊಂಪೆಯಿರಲಿ!
ಕಳ್ಳಿ ಪೆಳೆ ಕಂಟಿಯಿರಲಿ!
ಪೊಳ್ಳು ನನ್ನೆದುರೆಲ್ಲ;
ತಳ್ಳಿ ಹಾಕುವೆ ನಾನು
ಕೋಟಿ ಕಂಟಕವು ಬರಲಿ!

೬

ನಿನ್ನನ್ನು ಪಡೆವ ಬಯಕೆ
ನಿನ್ನನ್ನು ಮುಡಿವ ಬಯಕೆ
ನನ್ನ ಮನ ತುಂಬಿಹುದು—
ನನ್ನೆದೆಯ ತುಂಬಿಹುದು;
ನನ್ನ ಕೈಗಿಂದು ನಿಲುಕೆ!

೭

ಒಡೆಯನಡಿಗೇರಿಸುವೆನು;
ನನ್ನ ಮುಡಿಗೇರಿಸುವೆನು.
ಬದುಕಿನೊಳು ಬರ್ದಿಲವನು
ಸದೆಮಾಡಿ ತೂಳುವೆನು;
ಬಾ ಕೈಗೆ ಬೇಗ ನೀನು!

ರೋಹಿಣಿಯು ಕವಿತೆಯನ್ನು ಒಂದು ಸಲ ಓದಿದಳು. ಇನ್ನೊಂದು ಸಲ ಓದಿದಳು. ಮತ್ತೆ ಮತ್ತೆ ಓದಿದಳು. ಸುಖದುಃಖದ ತೂಗುಯ್ಯಾಲೆ

ಯಲ್ಲಿ ಕುಳಿತು ತೂಗಾಡಿ ತೂಗಾಡಿ ಭ್ರಮೆಹಿಡಿದವಳಂತಾದಳು. ಅವಳ ಮುಖದಲ್ಲಿ ಆಗಾಗ ಆಶಾಭಾವದ ಮುಗುಳುನಗೆ; ಮತ್ತೆ ದುಃಖದ ಕಂಬನಿಗಳು; ಬಿಸಿಯಾದ ಉಸಿರುಗಳು. ಮಣಿಮಾಲೆಗೆ ಏನೂ ತಿಳಿಯದಂತಾಯಿತು. ಆತುರಭಾವದಿಂದವಳು ಕೇಳಿದಳು—

"ಇದೇನೇ ಅಕ್ಕಮ್ಮಾ?"

ರೋಹಿಣಿಯಿಂದ ಮರುಮಾತುಗಳೇ ಇಲ್ಲ. ಮಣಿಮಾಲೆ ಇನ್ನಿಷ್ಟು ತವಕದಿಂದ ಕೇಳಿದಳು—

"ಏನಮ್ಮಾ! ಆ ಕವಿತೆಯಲ್ಲಿ ಇದೇಯಾದರೂ ಏನು?"

ಈಗಲೂ ರೋಹಿಣಿಯು ಮೌನಿಯೇ. ಮಣಿಮಾಲೆಯು ಮತ್ತೆ ಮತ್ತೆ ದುಂಬಾಲುಬಿದ್ದು ಕೇಳಿದಳು—

"ಅದರಲ್ಲಿ ಇರುವುದಾದರೂ ಏನು? ನನಗೆ ಹೇಳಬಾರದೇ?"

ಬಿಗಿದು ಬರುವ ಕಂಠದಿಂದ ರೋಹಿಣಿಯು ಹೇಳಿದಳು.

"ನಿನಗೆ ಹೇಳಬೇಕಾದುದೇನೂ ಇಲ್ಲ! ನಾನು ನಾಳೆಯೇ ಊರಿಗೆ ಹೋಗಿಬಿಡಬೇಕು."

"ಇದೇನಮ್ಮಾ ಮಾತು? ಊರಿಗೇತಕ್ಕೆ ಹೋಗಬೇಕು?"

"ಅಹುದು ಮಾಲಾ! ನಾನಿನ್ನು ಇಲ್ಲಿ ಇರುವುದೆಂದರೆ ನಿನಗೆ ಅಷ್ಟು ಒಳ್ಳೆಯದಲ್ಲ. ನಿನಗೆ ನಿಜವಾದ ಸೌಖ್ಯವನ್ನು ಬಯಸುವವಳು ನಾನಾಗಿದ್ದರೆ, ಒಂದು ನಿಮಿಷವೂ ನಾನಿಲ್ಲಿ ಇರಲಾಗದು."

"ಹೀಗೇನು ಹೇಳುತ್ತೀಯೇ? ಒಮ್ಮೆಲೆ ಹುಚ್ಚುಗಿಚ್ಚು ಹಿಡಿಯಿತೇನು ನಿನಗೆ?"

"ತಂಗೀ, ನನಗೇನೂ ಹುಚ್ಚುಗಿಚ್ಚು ಹಿಡಿದಿಲ್ಲ. ನೀನು ಮಾತ್ರ ನಿನ್ನ ಹುಚ್ಚುತನ ಬಿಟ್ಟು ಜಾಣಳಾಗು— ಎಂದರೆ ಆಯಿತು. ನಾಳೆ ಬೆಳಗಿನ ಗಾಡಿಯಿಂದ ನಾನು ಹೊರಡಲೇ ಬೇಕು. ಮಾಲೇ! ನಿನ್ನಲ್ಲಿಯು ಹೆಣ್ಣಿನ ಕಣ್ಣು ಬೇಗನೆ ತೆರೆದು, ನಿನ್ನ ಬಾಳು ಸುಖವಾಗಿ ಸಾಗಲಿ!"

ಮಣಿಮಾಲೆಯು ಬೆರಗುಗೊಂಡ ನೋಟದಿಂದ ಅಕ್ಕನ ಮೋರೆಯನ್ನು ನೋಡಿಯೇ ನೋಡಿದಳು. ಆಗ ತಾನೇನು ಮಾತನಾಡಬೇಕೆಂಬುದನ್ನು ಅವಳು ಕಾಣದವಳಾದಳು.

ಜುಲೈ ೧೯೩೩

# ಜೀವದ ಹೂವು

ಬೆಳಗಿನ ಐದು ಗಂಟೆಗೆ ಸುಂದರಮ್ಮನಿಗೆ–ಬಡಿದೆಬ್ಬಿಸಿದಂತೆ–ಎಚ್ಚರ ವಾಯಿತು. ಎದ್ದು ಕುಳಿತಳು. ಬಳಿಯಲ್ಲಿಯೆ ಮಲಗಿ ನಿದ್ರಿಸುತ್ತಿದ್ದ ಗೋಪಾಲನ ಕಡೆಗೆ ನೋಡಿದಳು. ಮಿಣುಕುಮಿಣುಕಾಗಿದ್ದ ದೀವಿಗೆ ಯನ್ನು ಥಾಳಾಗಿಸಿದಳು. ಗೋಪಾಲನ ಮೈಯೆಲ್ಲವೂ ಹೊದ್ದಿಕೆಯಲ್ಲಿ ಅಡಗಿದ್ದು, ಮುಖವು ಮಾತ್ರ ಹೊರಕ್ಕೆ ಕಾಣುತ್ತಿದ್ದಿತು. ಹಾಲುಗಲ್ಲಿನ ಹೊಳಪಿನಲ್ಲಿ ನಸುವೆ ಸಂಜೆಗೆಂಪನ್ನು ಬೆರೆಯಿಸಿದಂತಹ ಮುಖದ ಬಣ್ಣ; ಎಳೆಯತನದ ಕುರುಹನ್ನು ಕಾಣಿಸುವಂತಹ ತುಂಬುಗಲ್ಲಗಳು; ತಳಿರು ದುಟಿಯ ಅಳತೆಯಬಾಯಿ, ಚಲುವನ್ನೆ ದುಂಡಗೆ ಮಾಡಿಸಿದಂತಹ ಮುದ್ದಾದ ಗದ್ದ; ನಿನ್ನೆ ಹಚ್ಚಿದ್ದ ಸಾದಿನಬೊಟ್ಟಿನಿಂದ ಈಗಲೂ ಅಂದವಾಗಿ ಕಾಣುತ್ತಿರುವ ಹಣೆ; ತಿರುಪತಿಯ ತಿಮ್ಮಪ್ಪನ ಹರಕೆಗೆಂದು ಹಾಗೆಯೆ ಬಿಟ್ಟು ಬಿಟ್ಟಿದ್ದ–ಕಪ್ಪು ಬಣ್ಣದ–ನಿಡುಜಡೆಗಳು; ಯಾವ ಕನಸನ್ನು ಕಾಣು ತಿದ್ದನೋ, ಕಿರುನಗೆಯು ಕೊಂಚವೆ ತುಟಿಗಳನ್ನು ಅರಳಿಸಿದೆ. ಸುಂದರಮ್ಮ ನೆಟ್ಟನೋಟದಿಂದ ಮಗನನ್ನು ನೋಡಿಯೇ ನೋಡಿದರು. ನೋಡು ನೋಡುತ್ತಿರುವಾಗಲೆ ಗಟ್ಟಿಯಾಗಿ ಮುತ್ತಿಡಬೇಕೆಂಬ ಯೋಚನೆಯೊಂದು ಮೊಳೆಯಿತು. ಮುತ್ತಿಡಲಿಕ್ಕೆ ಮುಖವು ಮುಂದುವರಿಯಿತು; 'ಬೆಳಗಿನ ಜಾವದ ಸಕ್ಕರೆನಿದ್ದೆಗೆ ಭಂಗಬಂದೀತು' ಎಂಬ ಮತ್ತೊಂದು ಯೋಚನೆ ಹೊಳೆದು ಮತ್ತೆ ಹಿಂದೆಗೆಯಿತು. ನೋಡಿನೋಡಿದಂತೆ ಕಣ್ಣುಗಳಿಗೆ ಇನ್ನಿಷ್ಟು ಅತೃಪ್ತಿಯೆಂಬುದನ್ನವು ಸೂಚಿಸುತ್ತಿದ್ದುವು. ತಟ್ಟನೆ ಬೆಚ್ಚಿ ಬಿದ್ದವರಂತಾಗಿ ಸುಂದರಮ್ಮ ಎಂದುಕೊಂಡರು : 'ಅಯ್ಯೊ! ನನ್ನ ಕೆಟ್ಟ ಕಣ್ಣುಗಳು. ಎಲ್ಲಿಯಾದರೂ ನನ್ನ ದೃಷ್ಟಿಯೇ ನನ್ನ ಕಂದಮ್ಮನಿಗಾದೀತು. ತಾಯಿಯ ದೃಷ್ಟಿ, ನಾಯಿಯ ದೃಷ್ಟಿ' ಎಂದು ನುಡಿದು ತೂಪಿರಿಯುತ್ತ, ತಮ್ಮೆರಡೂ ಕೈಗಳನ್ನು ಮಗನ ಮುಖದ ಮೇಲೆ ನಿವಾಳಿಸಿ, ಕಿವಿಯ ಮೇಲಕ್ಕಿಟ್ಟುಕೊಂಡು ಲಟಕ್ಕೆನ್ನಿಸಿದರು. ಹಾಗೆಯೇ ಮೇಲಕ್ಕೆದ್ದು ಮನೆ ಗೆಲಸಕ್ಕೆ ತೊಡಗಿದರು. ಅಂದಿನ ಸುಂದರಮ್ಮನ ನಡೆದಾಟವೆಂದರೆ ಕುಣಿ ದಾಟವೆಂದೇ ಹೇಳಬಹುದು. ಮನೆಗೆಲಸಗಳನ್ನು ಮಾಡುಮಾಡುತಿರುವಾಗ

ಅವರು ಅದೇನೇನು ಸವಿಗನಸುಗಳನ್ನು ಕಾಣುತ್ತಿದ್ದರೋ! ಅರಳಿದ ಹೃದಯವು ಮುಖದ ಮೇಲೆ ಒಡಮೂಡಿದ್ದಿತು. ಹಲ್ಲಿನಿಂದ ಕಚ್ಚಿಸಿ ಕೊಳುತಲಿದ್ದ ಕೆಳದುಟಿಯ ಬಾಯಿ, ಮೆಲುನಗೆಯಿಂದ ಕೂಡಿದ್ದಿತು. ಸುಂದರಮ್ಮ ಅಂದು ಮೊಗವೊಸೆವೆತ್ತ ಗೋಪಾಲನ ಚಿತ್ರವನ್ನು ಕಂಡಿರ ಬಹುದು. ಮದುವಣಿಗನಾಗಿ ನಿಂತ ಗೋಪಾಲನ ಮೂರ್ತಿಯನ್ನು ನೋಡಿರ ಬಹುದು. ಮಗುವನ್ನೆತ್ತಿಕೊಂಡು ನಿಂತ ಗೋಪಾಲನ ಪ್ರತಿಮೆಯನ್ನು ನಿಟ್ಟಿಸಿರಬಹುದು. ಎಂತಲೇ ಆವರಿಗಿಂದು ಅಷ್ಟೊಂದು ಉಲ್ಲಾಸ, ಉತ್ಸಾಹ.

ಇಂದು ಗೋಪಾಲನ ಎಂಟನೆಯ ಹುಟ್ಟಿದ ಹಬ್ಬ. ಶಿವರಾಯರ–ಸುಂದರಮ್ಮನ ಹಿಗ್ಗು ಹೃದಯದಲ್ಲಿ ಹಿಡಿಸದೆ ಹೊರಹೊಮ್ಮುತಿದ್ದಿತು. ಇಬ್ಬರೂ 'ಮಕ್ಕಳು ಮಕ್ಕಳು' ಎಂದು ಅದೆಷ್ಟೊ ಹಲುಬಿ ಹಂಬಲಿಸಿದ ವರು; ಬೆಂದು ಬೇಗುದಿಗೊಂಡವರು. ನಿಟ್ಟುಸಿರುಗಳಿಂದಲೇ ಬದುಕನ್ನು ಕಳೆದವರು. ನಾಡದೇವರಿಗೆ ಬೇಡಿಕೊಂಡವರು. ಕೊನೆಗೆ ಗೋಪಾಲನ ಮುದ್ದುಮೊಗವನ್ನು ಕಂಡು ಕುಣಿದಾಡಿದವರು. ಗೋಪಾಲನು ಬೆಳೆ ಬೆಳೆಯುತ್ತಲೆ ತನ್ನ ಎಳೆಯತನದ ಆಟಗಳಿಂದ, ತಾಯಿತಂದೆಗಳ ಹೃದಯ-ವೀಣೆಯನ್ನು ಸವಿಯಾಗಿ ಬಾರಿಸುತ್ತಿದ್ದನು. ಆ ವೀಣೆಯ ಗತ್ತಿಗನುಸಾರ ವಾಗಿಯೆ ಶಿವರಾಯ—ಸುಂದರಮ್ಮನ ಜೀವನಗೀತವು ಹೊನಲಾಗಿ ಹರಿಯುತ್ತಿದ್ದಿತು. ಒಬ್ಬನೆ ಒಬ್ಬ ಅಚ್ಚುಮೆಚ್ಚಿನ ಮಗ. ಆತನ ಹುಟ್ಟಿದ ಹಬ್ಬ. ತಂದೆತಾಯಿಗಳ ಜೀವ-ಹೃದಯಗಳು ಹರುಷದ ಹಕ್ಕಿ ಹಾರಾ ಡುತ್ತಿದ್ದರೆ ಅದರಲ್ಲಿ ಅಚ್ಚರಿಪಡಬೇಕಾದುದು ಏನು?

ಹುಟ್ಟಿದ ಹಬ್ಬಕ್ಕೊಮ್ಮೆ ಮನೆಯಲ್ಲಿ ಸತ್ಯನಾರಾಯಣನ ಪೂಜೆಯು ನಡೆಯುತ್ತಿದ್ದಿತು. ಇಂದೆ ಕೂಡ ಎಂದಿನಂತೆ ಅದು ನಡೆಯಬೇಕಾಗಿದ್ದಿತು. ಭಾವಿಕರಾದ ಶಿವರಾಯರು ಪೂಜೆಯನ್ನು ತುಂಬ ವಿಜೃಂಭಣೆಯಿಂದ ಜರು ಗಿಸುತ್ತಿದ್ದರು.

ಎಂಟು ಗಂಟೆಯ ಸಮಯ. ಪೂಜೆಯ ಸಾಹಿತ್ಯಗಳನ್ನೆಲ್ಲ ಅನು ಗೊಳಿಸಿಕೊಂಡು ಬರುವುದಕ್ಕೆಂದು ರಾಯರು ಪೇಟೆಯ ಕಡೆಗೆ ಹೋಗಿದ್ದಾರೆ. ಹುಲ್ಲೆಯ ಮರಿಯಂತೆ ಹಾರಾಡುತ್ತಿರುವ ಗೋಪಾಲನು ಮೊಗಸಾಲೆಯಲ್ಲಿ ಕುಳಿತು ಹರಿದುಹೋಗಿದ್ದ ತನ್ನ ಗಾಳಿಯಪಟವನ್ನು ಗಟ್ಟಿಮಾಡುತ್ತಲಿ

ದ್ದಾನೆ. ನಡುಮನೆಯಿಂದ ತಾಯಿಯ ಕೂಗು ಕೇಳಿಸಿತು– ‘ ಗೋಪಾ !

ಕುಳಿತಲ್ಲಿಂದಲೆ ಗೋಪಾಲನು ಕೇಳಿದ— ‘ ಏನಮ್ಮಾ ? ’

‘ ಹೊತ್ತಾಗುತ್ತದೆ ಬಾ ಮಗು ! ನಿನಗೆ ಎಣ್ಣೆ ಹೊಸುತ್ತೇನೆ ಸುಂದರಮ್ಮ ಹೇಳಿದರು.

‘ ಬಂದೆ ಬಂದೆ ಕೊಂಚ ತಡೆ, ಈ ಪಟವನ್ನಷ್ಟು ಗಟ್ಟಿ ಮಾಡುತ್ತೇನೆ ಇಂದು ಸಾಯಂಕಾಲ ನಾನು, ಪಲ್ಲ, ಕಿಟ್ಟ, ಚೆನ್ನ ಕೂಡಿ ಪಟ ಹಾರಿಸ ಲಿಕ್ಕೆ ಹೋಗುತ್ತೇವೆ. ’ ಗೋಪಾಲನು ಉತ್ಸಾಹದ ದನಿಯಲ್ಲಿ ಹೇಳಿದ ಅವನ ಮಾತಿನ ಕೊನೆಯೊಡನೆಯೆ ಕಂಬದ ಮೇಲಿನ ಹಲ್ಲಿಯೊಂದು ಲೊಟ ಲೊಟಸಲು ಮೊದಲುಮಾಡಿತು. ಬದುಕಿನಲ್ಲಿ ನೋಡಿದಲ್ಲೆಲ್ಲ ಇಂಪ ಸೊಂಪುಗಳನ್ನೇ ಕಾಣುತ್ತಿದ್ದ ಲೀಲಾಮೂರ್ತಿಯಾದ ಗೋಪಾಲನನ್ನು ಈ ಹಲ್ಲಿಯ ಲೊಟ ಲೊಟ ನುಡಿಯು ಏನು ಮಾಡುವುದು? ಗೋಪಾಲ ತನ್ನ ಪಟವನ್ನು ಗಟ್ಟಿಮಾಡಿಟ್ಟ. ಹಾರುತ್ತ ಹಾರುತ್ತ ಒಳಕ್ಕೆ ನಡೆದ.

ನಡುಮನೆಗೆ ಹೋಗಿ ನೋಡಿದ. ಅಂದವಾಗಿ ರಂಗವಲ್ಲಿ ಹಾಕಿದೆ ಮಧ್ಯದಲ್ಲಿ ನಾಲ್ಕು ಮೂಲೆಗೂ ಹೊಳೆಯುತ್ತಿರುವ ಬೆಳ್ಳಿಯ ಹೂಗಳನ್ನು ಕೂಡಿಸಿದ್ದ ಬಣ್ಣದ ಮಣೆಯಿರಿಸಿದೆ. ಗೋಪಾಲ ಮಣೆಯ ಮೇಲೆ ಕುಳಿತ ಕೊಂಡ. ‘ ಅಮ್ಮಾ ಬೇಗ ಬಾರಮ್ಮಾ ! ’ ಎಂದು ಕೂಗಿದ.

ಸುಂದರಮ್ಮ ಬಂದರು. ಗೋಪಾಲನನ್ನು ನೋಡಲು ಕುತೂಹಲ ಗೊಂಡ ಕಣ್ಣುಗಳು. ಆತನ ಮೃದುಸ್ಪರ್ಶಕ್ಕಾಗಿ ಆಶೆಪಡುತಿರುವ ಕೈಗಳು. ಯಾವುದೊ ಒಂದು ಭಾವಗಾಯನದೊಡನೆ ನರ್ತನ ಮಾಡುತ್ತಿ ರುವ ಹೃದಯ. ಎಣ್ಣೆಯಿಂದ ಕೂಡಿದ್ದ ಬಟ್ಟಲನ್ನು ಬಲಗೈಯಲ್ಲಿ ಹಿಡಿದು ಕೊಂಡಿದ್ದರು. ಗೋಪಾಲನು ಕುಳಿತಿದ್ದ ಮಣೆಯ ಮುಂದೆ ಬಂದರು ಕುಳಿತಿದ್ದ ಗೋಪಾಲ ‘ ಅಮ್ಮಾ ನನಗೆ ಬಾಳ ಎಣ್ಣೆ ಹಚ್ಚಬೇಡ ನೋಡು ! ’ ಎಂದು ತಟ್ಟನೆ ಎದ್ದು ನಿಂತ ಏಳುವಾಗಲೆ ತಲೆ ಸುಂದರಮ್ಮನ ಕೈಗೆ ತಗಲಿ ಎಣ್ಣೆಯ ಬಟ್ಟಲು ಬ:ಡಮೇಲಾಗಿ ಬಿದ್ದುಬಿಟ್ಟಿತು. ಎಣ್ಣೆಯೆಲ್ಲ ನೆಲದ ಪಾಲಾಯಿತು. ಎಣ್ಣೆಯ ಬಟ್ಟಲು ನೆಲಕ್ಕೆ ಬಿದ್ದೊಡನೆ— ಕಣ್ಣರೆಪ್ಪೆ ಹಾಕುವಷ್ಟು ವೇಳೆ ಸುಂದರಮ್ಮನ ಕರುಳಿಗೆ ಇರುವೆ ಕಚ್ಚಿದಂತಾಯಿತು ಆದರೆ ಅವಳು ಈಜಾಡುತ್ತಲಿದ್ದ ಹಿಗ್ಗಿನ ಕಡಲು ಇರುವೆಯ ಕಡಿತವನ್ನು ಕೂಡಲೆ ಮರೆಯಿಸಿಬಿಟ್ಟಿತು. ಬೇರೆ ಎಣ್ಣೆ ತಂದಳು. ಗೋಪಾಲನಿ

ಹೊಸಿದಳು. ನೀರೆರೆದಳು. ಆಯಿತು.

* * * *

ಮನೆಯಲ್ಲಿ ನಂಟರಿಷ್ಟರ ಗದ್ದಲಕ್ಕೆ ಅಳತೆಯಿಲ್ಲ. ಹುಟ್ಟಿದ ಹಬ್ಬಕ್ಕೆಂದು ಅದೆಷ್ಟೋ ಜನರಿಗೆ ಔತನ. ಮನೆಗೆ ಬಂದ ಹಿರಿಯರಿಗೆಲ್ಲ ನಮಸ್ಕಾರ ಮಾಡಿ ಮಾಡಿ ಗೋಪಾಲನಿಗೆ ಬೇಸರ. ಹಿರಿಯರು ಕೊಟ್ಟ ಹರಕೆಗಳು ರೂಪುಗೊಂಡು ನಿಂತಿದ್ದರೆ, ಗೋಪಾಲನ ತಲೆಯು ಅವುಗಳ ಹೊರೆಯನ್ನೇನೂ ಹೊರುತ್ತಿರಲಿಲ್ಲ. ಉಸಿರಿನೊಡನೆ ಹೊರಕ್ಕೆ ಹೊರಟ ಶಬ್ದ, ಗಾಳಿಯೊಡನೆ ಗಾಳಿಯಾಗಿ ಹೊರಟು ಹೋಗಿ ಬಿಡುತ್ತಿದ್ದುವೆಂತಲೆ ಚಿನ್ನ. ಅವರಿತ್ತ ಹರಕೆಯ ನುಡಿಗಳನ್ನು ಬರೆದರೆ ನೂರಾರು ಹಾಳೆಗಳು ತುಂಬಿಬಿಡಬಹುದು.

ಅದೆಷ್ಟೊ ಬೆಡಗುಗಾತಿಯರ ಕಡೆಗಣ್ಣ ನೋಟಕ್ಕೆಂದು ಗೋಪಾಲ ಪಾತ್ರನಾದ. ಅವರ ತೊಡೆಮುಡಿಲ ಜಗುಲಿಯ ಮೇಲೆ ಕುಳಿತ. ಗುಲಾಬಿಯ ಸೋಂಕಿನಂತಹ ಅವರ ಮೆಲುಮುದ್ದಿನ ಉಡುಗರೆ ಪಡೆದ.

ಓರಗೆಯವರಿಗೆ ಗೋಪಾಲನ ವಿಷಯವಾಗಿ ಎಂದಿಗಿಂತಲೂ ಹೆಚ್ಚಿನ ಮಮತೆಯಿಂದು. ಗೋಪಾಲ ನನ್ನೊಡನೆ ಹೆಚ್ಚಾಗಿ ಮಾತನಾಡಲಿ, ತನ್ನೊಡನೆ ಹೆಚ್ಚಾಗಿ ಮಾತನಾಡಲಿ, ಎಂಬೊಂದು ಬಗೆಯ ಮೇಲಾಟದ ಬಯಕೆಯವರಲ್ಲಿ. ಗೋಪಾಲ ಯಾರೊಡನಾದರೂ ನಗುನಗುತ್ತ ಮಾತನಾಡಿದಲ್ಲಿ ಆತನು ತನ್ನನ್ನು ಧನ್ಯನೆಂದು ತಿಳಿದುಕೊಳ್ಳುತ್ತಿದ್ದನು. ಹಬ್ಬದ ಉಡುಗೆತೊಡಿಗೆಗಳನ್ನು ಹಾಕಿಕೊಂಡು ಎಲ್ಲೆಲ್ಲಿಯೂ ಹಾರಾಡುತ್ತಿದ್ದ ಗೋಪಾಲನನ್ನು, ಸುಂದರಮ್ಮ ನಿಂತು ನಿಂತು ನೋಡುತ್ತಿದ್ದರು. ಆಗ ಅವರ ರೋಮರೋಮಗಳೂ ಅವರಿಗಾಗಿದ್ದ ಆನಂದವನ್ನು ಹೊರಕ್ಕೆ ತೂರುತ್ತಿದ್ದುವು. ಶಿವರಾಯರ ಹಿಗ್ಗಿಗೂ ಇತಿಮಿತಿಯಿರಲಿಲ್ಲ. ಆದರೆ ಅದು ತಳಿರ ಜೊಂಪಿನ ಮರೆಯಲ್ಲಿ ಅಡಗಿಕೊಂಡಿದ್ದ ಗುಲಾಬಿಯಂತಹದು. ಅಂದು ಗೋಪಾಲ ಎಲ್ಲರಿಗೂ ಮುಂಗೈಯ ಗಿಣಿ. ಕಣ್ಣ ತಣಿಸುವ ಮಣಿ. ಸುಂದರಮ್ಮ ತಮ್ಮ ಮನಸ್ಸಿನಲ್ಲಿಯೇ ನಿಶ್ಚಯ ಮಾಡಿದ್ದರು— ಕೆಲಸವೆಲ್ಲವೂ ಕೊನೆಗಂಡ ಬಳಿಕ ರಾತ್ರಿ ಗೋಪಾಲನಿಗೆ ದೃಷ್ಟಿಯನ್ನು ತೆಗೆಯಬೇಕು ಎಂದು.

* * * *

ಪೂಜೆಗೆಂದು ಮಂಟಪ ಸಿದ್ಧವಾಯಿತು. ನಾಲ್ಕೂ ಮೂಲೆಗೆ ನಾಲ್ಕು ಬಾಳೆಯ ಮರಿಗಳು ಎಡಕ್ಕೆ ಬಲಕ್ಕೆ ಅಂದವಾಗಿ ಕಟ್ಟಿದ ಸೋಗೆ-ಗಬ್ಬುಗಳು. ಚೆಂದಳಿರಿನ ತೋರಣ. ಮಂಟಪದ ಮಧ್ಯೆ ನಯವಾದ ಸುಳುವಿನ ಕೆಲಸ ಮಾಡಿದ್ದ ಗದ್ದುಗೆ. ಅದರ ಮೇಲೆ ಪೂಜೆಗಾಗಿ ಅಣಿಮಾಡಿ ಇಟ್ಟಿದ್ದ ಕಲಶ. ಮುಂದುಗಡೆ ಬಗೆಬಗೆಯ ಅಲರು ತಳಿರುಗಳನ್ನು ತಟ್ಟೆಯಲ್ಲಿ ತುಂಬಿ ತುಂಬಿ ಇಟ್ಟಿದ್ದರು. ಮಂಗಲ ದ್ರವ್ಯಗಳನ್ನೂ ಪಂಚಾಮೃತ ಸ್ನಾನದ ಸಾಮಗ್ರಿಗಳನ್ನೂ ತುಂಬಿಟ್ಟಿದ್ದ ಬೆಳ್ಳಿಯ ಪಾತ್ರೆಗಳಲ್ಲಿ, ಹಚ್ಚಿಟ್ಟಿದ್ದ ದೀಪಗಳ ಕಿರಣಗಳು ಮರುಬೆಳಕನ್ನು ಹೊಂದಿದ್ದುವು. ಬಾಳೆಯ ಮರಿಗಳೂ ಸೋಗೆಗಬ್ಬುಗಳೂ ಪರಮಾತ್ಮನ ಪೂಜೆಯಲ್ಲಿ ತಾವು ಪಾಲುಕಾರರಾದೆವೆಂದು ತಣಿದು ಕುಣಿಯುತ್ತಿದ್ದುವೊ! "ಹುಟ್ಟಿ ಬಂದು ಮಾಡಬೇಕಾಗಿದ್ದ ನಮ್ಮ ಕೊನೆಯ ಕೆಲಸ ಮಾಡುವುದಕ್ಕೆ ಅವಕಾಶ ದೊರೆಯಲಿಲ್ಲವಲ್ಲಾ!" ಎಂದು ವ್ಯಸನದಿಂದ ಕಂಪಿಸುತ್ತಿದ್ದುವೋ ಕಾಣೆ. ಅವುಗಳ ಒಳಮಾತನ್ನು ತಿಳಿದವರಾರು ?

ಒಂದು ಗಂಟೆಗೆ ಪೂಜೆಗೆ ಆರಂಭವಾಯಿತು. ಸ್ನಾನ ಮಾಡಿ ಶಿವರಾಯರು ಆಸನದಲ್ಲಿ ಕುಳಿತರು. ಪುರೋಹಿತರು ಪೂಜೆಯ ಮಂತ್ರಗಳನ್ನು ಹೇಳಲು ತೊಡಗಿದರು. ಹಚ್ಚಿಟ್ಟಿದ್ದ ಅಗರುಬತ್ತಿಗಳ ನರುಗಂಪು, ಪೂಜೆಗಾಗಿ ಇಟ್ಟಿದ್ದ ಬಗೆಬಗೆಯ ಅರಳುಗಳ ಒಳ್ಗಂಪು, ಕೇಸರಿ ಪಚ್ಚೆಕರ್ಪೂರ ಶ್ರೀಗಂಧ ಮೊದಲಾದ ಪೂಜಾದ್ರವ್ಯಗಳ ಬಲ್ಗಂಪು, ಇವೆಲ್ಲ ಬೆರೆತು ಉಂಟಾದ ಅದೊಂದು ಮಿಶ್ರಗಂಧವು ಎಲ್ಲರನ್ನೂ "ಅಹಹ!" ಎಂದು ಬಾಯಿ ತೆರೆಯಿಸುತ್ತಿದ್ದಿತು. ಪುರೋಹಿತರ ಕೊರಳು ಇಂಪಾದುದು. ತಾವು ಹೇಳುತ್ತಿದ್ದ ಮಂತ್ರಗಳಿಗೆಲ್ಲ ಅವರು ಒಂದು ಬಗೆಯ ಸಂಗೀತದ ಮೆರುಗನ್ನು ಕೊಡುತ್ತಿದ್ದರು. ಪೂಜೆಯು ವೈಭವದಿಂದ ನಡೆದಿದ್ದಿತು.

ಶಿವರಾಯನ ಅಕ್ಕ ಶಾರದಮ್ಮನವರಿಗೆ ತೆಂಗಿನ ಕಾಯೊಂದು ಬೇಕಾಯಿತು. ಪೇಟೆಯಿಂದ ತರಬೇಕು. "ಹೇಗೆ ಮಾಡಬೇಕು.... " ಎಂದು ಯೋಚಿಸಿದರು. ಹಿರಿಯರೆಲ್ಲರೂ ಪೂಜೆ ನೋಡುತ್ತ ಕುಳಿತಿದ್ದಾರೆ. ಗೋಪಾಲನೊಬ್ಬ ಮಾತ್ರ ಅತ್ತಿಂದಿತ್ತ ಇತ್ತಿಂದತ್ತ ಎಲ್ಲೆಲ್ಲಿಯೂ ಓಡಾಡುತ್ತಿದ್ದಾನೆ. ಶಾರದಮ್ಮ ಗೋಪಾಲನನ್ನು ಕರೆದರು, ಮೆಲ್ಲಗೆ ಹೇಳಿದರು—
"ಗೋಪಾಲ! ನನಗೊಂದು ತೆಂಗಿನ ಕಾಯಿ ಬೇಕಾಗಿದೆಯೋ."

" ಅದಕ್ಕೇನವ್ಮಾ! ಪೇಟೆ ಬಳಿಯಲ್ಲಿಯೇ ಇದೆ. ನಾನು ಹೋಗಿ ತರಲೆ ?" ಗೋಪಾಲ ನುಡಿದ.

" ಹಾಗಾದರೆ ತೆಗೆದುಕೊ—ದುಡ್ಡು ; ಬೇಗನೆ ಬಾ ಗೊತ್ತಾಯಿತೆ?" ಶಾರದವ್ಮ ಹೇಳಿದರು.

ಮೊದಲೇ ಗೋಪಾಲನ ನಡಿಗೆಯೆಂದರೆ ಚಿಕ್ಕ ಚಿಕ್ಕ ನೆಗೆತಗಳು. ಇಂದಂತೂ ಮನೆಯಲ್ಲಿ ಸಡಗರದ ಸುಗ್ಗಿ. ಉತ್ಸಾಹವು ಉಕ್ಕಿ ಉಕ್ಕಿ ಹೊರಸೂಸುತ್ತಲಿದೆ. ಕೈಗೆ ದುಡ್ಡು ಬಂದೊಡನೆಯೆ ಕಿವಿಗೆ ಗಾಳಿ ತುಂಬಿದ ಎಳಗರುವಿನ ನಡಿಗೆಯಲ್ಲಿಯೆ ಆತ ಹೊರಟುಬಿಟ್ಟ.

ಪೂಜೆಗೆಂದು ಬಂದು ಕುಳಿತಿದ್ದ ಹೆಂಗುಸರೊಡನೆ ಸುಂದರವ್ಮ ಮಾತನಾಡುತ್ತಿದ್ದುದರಲ್ಲಿ, ಮುಕ್ಕಾಲುಪಾಲೆಲ್ಲವೂ ಗೋಪಾಲನ ಗುಣದ ಬಣ್ಣನೆಯೆ. ಆತನ ತುಂಟಾಟವನ್ನೂ ಕೌತುಕದ ಕತೆಯನ್ನಾಗಿ ಮಾಡಿ ಹೇಳುವರು ; ಜಾಣತನವನ್ನೂ ಕೌತುಕದ ಕತೆಯನ್ನಾಗಿ ಮಾಡಿ ಹೇಳುವರು. ಗೋಪಾಲನ ಕರುಳಿನ ಬಳಗದವರು ಆತನ ಕತೆ ಕೇಳಿ, ಹೃದಯ ವರಳಿ ನಗುತ್ತಿದ್ದರು. ಹೊರಗಿನವರು ಬಲವಂತದ ನಗೆ ನಗುತ್ತಿದ್ದರು. " ತನ್ನ ಮಗನ ಬಣ್ಣನೆಯನ್ನು ಎಷ್ಟು ಮಾಡುವಳಿವಳು!" ಎಂದು ಒಂದು ಬಗೆಯ ಉಪಹಾಸದ ಬಿಂಕದಿಂದಲೂ ನಗುತ್ತಿರಬಹುದು ಕೆಲವರು.

ಪೂಜೆಯು ಯಥಾಸಾಂಗವಾಗಿ ನಡೆದಿದ್ದಿತು. ಪೂಜೆಗೆ ಮೊದಲು ಮಾಡಬೇಕಾಗಿದ್ದ ಬೇರೆ ಬೇರೆ ದೇವತೆಗಳ ಪೂಜೆಯಾಯಿತು. ಬಳಿಕ ಸತ್ಯ ನಾರಾಯಣನ ಪೂಜೆಗಾರಂಭವಾಗಿ, ಒಂದೊಂದೇ ಉಪಚಾರಗಳ ಸಮರ್ಪಣೆ ನಡೆಯಿತು. ಎಲ್ಲವೂ ಆಗಿ, ಅಷ್ಟೋತ್ತರನಾಮ ಪೂಜೆಗೆ ಮೊದಲಾಯಿತು. ಪುರೋಹಿತರು ಮಂತ್ರ ಹೇಳುವವರು ; ರಾಯರು ಹೂವಿನ ತಟ್ಟೆಯನ್ನು ಮುಂದಿಟ್ಟುಕೊಂಡು, ಪುರೋಹಿತರು ಹೇಳಿದಂತೆ ಒಂದೊಂದಾಗಿ ಹೂವನ್ನು ಏರಿಸುವವರು. ಪುರೋಹಿತರು ಹೇಳುತ್ತಿದ್ದರು : 'ಓಂ ಸತ್ಯಾತ್ಮನೇ ನಮಃ, ಓಂ ಸತ್ಯರೂಪಾಯ ನಮಃ, ಓಂ ಸತ್ಯಸಂಧಾಯ ನಮಃ, ಓಂ ಸತ್ಯಪೂರ್ಣಾಯ ನಮಃ, ಓಂ ಸತ್ಯನಾಥಾಯ ನಮಃ.... ' ಅಷ್ಟರಲ್ಲಿಯೇ ಹುಡುಗನೊಬ್ಬನು ಓಡುತ್ತ ಬಂದ— ಗಾಬರಿಯ ನಡುಗು ದನಿಯಿಂದ ಹೇಳಿದ :

" ಗೋಪಾಲನ ಮೇಲೆ ಮೋಟಾರು ಹಾಯಿತು."

ಬರಸಿಡಿಲೊಂದು ಗುಡುಗಿದಂತಾಯಿತು. ಎಲ್ಲರ ಕೈಯಲ್ಲಿಯ ಕೆಲ
ಸವೂ, ಬಾಯಲ್ಲಿಯ ಮಾತೂ, ಮನದಲ್ಲಿಯ ಯೋಚನೆಯೂ ತಟ್ಟನೆ
ನಿಂತುಬಿಟ್ಟುವು. "ಎಲ್ಲಿ? ಎಲ್ಲಿ? ಗೋಪಾ...." ಎನ್ನುತ್ತ ಶಿವರಾಯರು
ಎದ್ದು, ಆವಸರದಿಂದ ಬೀದಿಯ ಬಾಗಿಲಿಗೆ ಬಂದರು. ಮನೆಗೆ ಬಂದಿದ್ದ
ಜನರು ಅವರನ್ನು ಹಿಂಬಾಲಿಸಿ ತಾವೂ ಬಂದರು. ಶಿವರಾಯರು ಬೀದಿಯ
ಬಾಗಿಲಿಗೆ ಬಂದು ನಿಂತರು. ಯಾರೋ ಇಬ್ಬರು ಎಚ್ಚರದಪ್ಪಿದ ಗೋಪಾಲ
ನನ್ನು ಎತ್ತಿಕೊಂಡು ಮನೆಗೆ ತಂದರು. ಶಿವರಾಯರು ನೋಡಿದರು.
ಮಾತನಾಡುವುದಕ್ಕೆ ನಾಲಗೆಯೇಳದಾಯಿತು. ಅಡಿಯನ್ನು ಕಿತ್ತಿಡಲು
ಬರದಾಯಿತು. ಕಣ್ಣುಗಳನ್ನು ಕಾವಳ ಮುಸುಕಲು ತೊಡಗಿತು. ಕೆಳಕ್ಕೆ
ಬೀಳುವವರು; ಬಳಿಯಲ್ಲಿದ್ದ ಪುರೋಹಿತರು ಗಟ್ಟಿಯಾಗಿ ಹಿಡಿದರು.
ಹಾಗೆಯೆ ಎಳೆದುಕೊಂಡು ಬಂದು ಮೊಗಸಾಲೆಯಲ್ಲಿ ಕೂರಿಸಿದರು.

ಮೊಗಸಾಲೆಯಲ್ಲಿಯೇ ಒಬ್ಬರು ಕಂಬಳಿಯನ್ನು ಹಾಸಿದರು. ಮೇಲೆ
ಗೋಪಾಲನನ್ನು ಮೆಲ್ಲಗೆ ಮಲಗಿಸಿ ಆಯಿತು. ಹಬ್ಬದ ಬಟ್ಟೆಗಳೆಲ್ಲ ಹುಡಿ
ಯಾಗಿ ಹೋಗಿವೆ. ಬಾಚಿ ಕಟ್ಟಿದ್ದ ಜಡೆ ಕೆದರಿ ಹೋಗಿದೆ. ಕುತ್ತಿಗೆಯ
ಹತ್ತಿರವೆ ಗಾಲಿ ಹಾಯ್ದಿದ್ದಿತು. ಅರೆದೆರೆದ ಬಾಯಿ ನಿಮಿಷಕ್ಕೆ, ಎರಡು
ನಿಮಿಷಕ್ಕೆ ಬಿಕ್ಕುತ್ತಿದ್ದಿತು. ತೆರೆದ ಕಣ್ಣಿನಲ್ಲಿ ಕಳೆಗುಂದಿದ ಕರೆಯ ಗುಡ್ಡೆ
ಒಮ್ಮೆ ಹೊರಕ್ಕೆ ಬರುತ್ತಿದ್ದಿತು; ಇನ್ನೊಮ್ಮೆ ಮರೆಯಾಗುತ್ತಿದ್ದಿತು.

ಶಿವರಾಯರು ನೋಡಿದರು. 'ಅಯ್ಯೋ....! ನನ್ನ ಗೋಪಾಲ....!'
ಎಂದು ಗೋಪಾಲನನ್ನಪ್ಪಿಕೊಂಡರು. ತಲೆಯನ್ನೆತ್ತಿ ತಮ್ಮ ತೊಡೆಯ
ಮೇಲಿಟ್ಟುಕೊಂಡರು. ರಾವು ಹಿಡಿದು ಹೋಗಿದ್ದ ಮುಖದಿಂದ ಸುಂದ
ರಮ್ಮ ಗೋಳಾಡುತ್ತ ಹೊರಕ್ಕೆ ಬಂದಳು. ಎಚ್ಚರವಿಲ್ಲದವರಂತೆ ಗೋಪಾ
ಲನ ಮೈಮೇಲೆ ತಲೆಯನ್ನಿಟ್ಟು 'ಗೋಪಾಲ!' ಎಂದು ಕೂಗಲು ತೊಡ
ಗಿದಳು. ಮನೆಯಲ್ಲಿ ಎಲ್ಲಿ ನೋಡಿದಲ್ಲೆಲ್ಲ ಆಕ್ರೋಶವೇ. ಗೋಪಾಲನ
ಉಸಿರಿನ ಕೊನೆ ಶಿವರಾಯರ ತೊಡೆಯ ಮೇಲೆಯೇ ಆಯಿತು. ಕನ್ನಡ
ಭಾಗವತದ ಕವಿ ಹೇಳಿರುವನಲ್ಲ! ಹಾಗೆಯೆ 'ಮಂಗಳದ ಬೆಳಗೈಯ್
ಗಳೊಳು ಸಲೆ ಇಂಗಳದ ಮಳೆಗರೆದೊಲಾಯಿತು!'

ಗುಂಪುಗೂಡಿದ ಜನರು ಸಹಾನುಭೂತಿಯ ಕಣ್ಣೀರು ಸುರಿಸುತ್ತ
ಚರ್ಚೆಗೆ ಮೊದಲುಮಾಡಿದರು. 'ಯಾರ ಮೋಟಾರು?' 'ಹೇಗೆ

ಹಾಯಿತು ?' 'ಗೋಪಾಲ ಹೊರಕ್ಕೇತಕ್ಕೆ ಹೋಗಿದ್ದ ?' 'ಮೋಟಾರಿನವರ ಮೇಲೆ ಕೇಸು ನಡೆಯಿಸಿಯೇ ಬಿಡಬೇಕು.' 'ಡ್ರೈವರ್ ಅಂದ್ರೆ ಪಶುಗಳ ಹಾಗೆ ಇರುತ್ತಾರೆ ನೋಡಿ.'

ಶಿವರಾಯರ ದೊಡ್ಡಪ್ಪನೊಬ್ಬ ನಿಟ್ಟುಸಿರಿನೊಡನೆ ಮಾತನಾಡಿದ—

"ನಮ್ಮಪ್ಪ ಸತ್ಯನಾರಾಯಣನಿಗೆ ಈ ಜೀವದ ಹೂವೇ ಬೇಕಾಗಿದ್ದಿತೇನೋ !" ಸಪ್ಟಂಬರ್ ೧೯೩೧

---

# ಅನಾಥಬಂಧು

## ೧

ಶಾಮಲೆಯ ತಂದೆ ರಾಮರಾಯರು ವಿಜಯಪುರದ ಜಿಲ್ಲೆಯ ಆಫೀಸಿನಲ್ಲಿ ಗುಮಾಸ್ತೆಯಾಗಿದ್ದರು. ಹಿರಿಯರಿಂದ ಬಂದ ಹೊಲಸೆಲ, ಆಸ್ತಿವೃತ್ತಿಗಳೇನೂ ರಾಮರಾಯರಿಗಿರಲಿಲ್ಲ. ಸಂಬಳವು ತಿಂಗಳೊಂದಕ್ಕೆ ಎಪ್ಪತ್ತು ರೂಪಾಯಿ. ಹೆಚ್ಚಿನ ಪ್ರಾಪ್ತಿಗಾಗಿ ರಾಮರಾಯರು ಆಶೆಪಡುತಿರಲಿಲ್ಲ. ಸಂಸಾರಕ್ಕೆ ಸಂಬಂಧಿಸಿದ ವೆಚ್ಚವೆಲ್ಲವೂ ಸಂಬಳದ ಹಣದಿಂದಲೇ ಸಾಗಬೇಕು. ಮನೆಯಲ್ಲಿಯ ಜನರೆಂದರೆ ರಾಮರಾಯರು, ಹೆಂಡತಿ ಸೀತಮ್ಮ, ಎಳಮಗುವಾದ ಶಾಮಲೆ, ಸೀತಮ್ಮನ—ವಿಧವೆಯಾದ—ತಾಯಿಯೊಬ್ಬಳು; ಹೀಗೆ ನಾಲ್ಕು ಜನರು. ಶಾಮಲೆಯ ಬೆನ್ನಮೇಲೆ ಸೀತಮ್ಮ ಒಂದು ಗಂಡುಮಗುವನ್ನು ಹೆತ್ತಿದ್ದರು. ಅದು ಬಹಳ ದಿವಸ ಬಾಳಲಿಲ್ಲ. ಹುಟ್ಟಿದ ಹತ್ತು ದಿನಗಳಲ್ಲಿಯೆ ಸತ್ತು ಹೋಯಿತು.

ರಾಮರಾಯರು ಧನದಿಂದ ಬಡವರಿದ್ದರೂ ಮನದಿಂದ ಬಲ್ಲಿದರು. ಒಳ್ಳೆ ಉದಾರ ಹೃದಯದವರು. ಎಳೆಯತನದಿಂದಲೂ ಅವರಿಗೆ ಬಡತನದ ಪರಿಚಯವಿದ್ದಿತಾದುದರಿಂದ ಬಡವರು ಪಡುವ ಭವಣೆಯನ್ನು ಬಲ್ಲವರಾಗಿದ್ದರು. ಎಂತಲೇ ಬಾಗಿಲಿಗೆ ಬಂದ ಬಡ ಬೇಡುಗರನ್ನು, ಬರಿಗೈಯಿಂದ ಎಂದೆಂದೂ ಮರಳಿಸುತಿರಲಿಲ್ಲ. ಗತಿಯಿಲ್ಲದ ವಿದ್ಯಾರ್ಥಿಗಳಿಗೆ ಜೀವವನ್ನು

ಒತ್ತೆಯಿಟ್ಟಾದರೂ ನೆರವಾಗುವರು. ಆದುದರಿಂದ ಈ ತಿಂಗಳಿನ ಸಂಬಳದ ಹಣವು ಮುಂದಿನ ತಿಂಗಳ ಮೊದಲನೆಯ ದಿನವನ್ನು ಕಾಣುವುದೆಂದರೆ, ರಾಮರಾಯರ ಸಂದರ್ಭದಲ್ಲಿ– ಹಸುವು ಕೋಣಗರುವನೀದಂತಹ– ಅಸಂಭವನೀಯ ಸಂಗತಿ. ಮಿತವ್ಯಯದ ಮಾತು, ಮೊದಲಿನ ಜನ್ಮದಲ್ಲಿಯಾದರೂ ರಾಮರಾಯರ ಮನದಲ್ಲಿ ಬಂದಿದ್ದಿತೋ ಇಲ್ಲವೋ! ಎಂಬುದು ಸಂಶಯ; ಎಂದ ಮೇಲೆ ಅವರ ಬಳಿಯಲ್ಲಿ ಹಣವು ಉಳಿಯುವ ಬಗೆಯೆಂತು?

ಲಚ್ಚಪ್ಪನೆಂಬುವವನು ರಾಮರಾಯರ ಆಫೀಸಿನಲ್ಲಿ ಒಬ್ಬ ಜವಾನ. ಕುರುಬರ ಪಂಗಡಕ್ಕೆ ಸೇರಿದವನು; ತೀರ ಬಡವ. ರಾಮರಾಯರಲ್ಲಿ ಆತನದು ಬಲುಶ್ರದ್ಧೆ, ವಿಶ್ವಾಸ. ರಾಮರಾಯರಾದರೂ ಲಚ್ಚಪ್ಪನನ್ನು ತುಂಬ ನಂಬುಗೆಯಿಂದ ಕಾಣುತ್ತಿದ್ದರು. ಕಾರಣವನ್ನು ಮಾತ್ರ ಕೇಳಕೂಡದು. ಲಚ್ಚಪ್ಪನ ಮಗ ಗೋವಿಂದನು ರಾಮರಾಯರ ಮನೆಯಲ್ಲಿಯೇ ಇರುತಿದ್ದನು. ಅವನಿಗಾಗ ಹದಿನಾರು ವರ್ಷಗಳು. ಒಳ್ಳೆಯ ಹುಡುಗ. ಕುದುರುವ ಬುದ್ಧಿಯವ. ರಾಮರಾಯರ ಮನೆಯಲ್ಲಿ ತರುಬರುವ ಸಣ್ಣ ದೊಡ್ಡ ಕೆಲಸಗಳನೆಲ್ಲ ಅವನೇ ಮಾಡುತಿದ್ದನು. ಮನೆಯವರ ನಂಬುಗೆಯನ್ನು ಪೂರ್ಣವಾಗಿ ಸಂಪಾದಿಸಿದ್ದನು. ರಾಮರಾಯರಿಗೆ 'ಚಿಕ್ಕಪ್ಪ' ಎಂತಲೂ ಸೀತಮ್ಮನಿಗೆ 'ಚಿಕ್ಕಮ್ಮ' ಎಂತಲೂ ಕರೆಯುವನು. ಅವರೂ ಗೋವಿಂದನೊಡನೆ ಮನೆಯ ಮಗನೆಂಬ ಭಾವನೆಯಿಂದಲೇ ನಡೆಯುತಿದ್ದರು.

ಶಾಮಲೆಯಲ್ಲಿ ಗೋವಿಂದನದು ಹೇಳಲಾರದಷ್ಟು ಮಮತೆ. ಒಡಹುಟ್ಟಿದ ತಂಗಿಗಿಂತಲೂ ಹೆಚ್ಚಾಗಿ ಪ್ರೀತಿಸುವನು. ಶಾಮಲೆಯು ಎಲ್ಲಿ ಕುಳಿತಿದ್ದರೂ, ಗೋವಿಂದನು ಕರೆದರೆ ಎಡವುತ್ತ ಮುಗ್ಗುತ್ತ ಓಡಿ ಬರುವಳು; ತೊಡೆಯ ಮೇಲೆ ಪ್ರೇಮದಿಂದ ಕೂಡುವಳು; ಮುದ್ದುಮುದ್ದಾಗಿ ಮಾತನಾಡುವಳು; ಮೈಮೇಲೆ ಬೀಳುವಳು; ಗುದ್ದುವಳು; ಚಿವುಟುವಳು; ಇನ್ನೇನಾದರೂ ಹುಡುಗಾಟ ಮಾಡುವಳು. ಅವಳು ಮಾಡುವುದೆಲ್ಲ ಗೋವಿಂದನಿಗೆ ಅಂದವಾಗಿಯೇ ಕಾಣುವುದು. ಶಾಮಲೆಯು ಹಟಮಾಡಿ ಅಳುತ್ತಿದ್ದರೆ, ಕರೆದು ಸಂತಯಿಸಿ ಆಡಿಸುವವನು ಗೋವಿಂದನೇ. ಗೋವಿಂದನು ರಾಮರಾಯರ ಮನೆಯವರೆಲ್ಲರೊಡನೆ ಬೆರೆತು ಹೋಗಿದ್ದನು.

ಗೋವಿಂದನಾಗ ಓದುತಿದ್ದುದು ಇಂಗ್ಲಿಷು ಆರನೆಯ ತರಗತಿಯಲ್ಲಿ. ಲಚ್ಚಪ್ಪನು ಬಡವ; ಸಂಬಳದ ಹದಿನೈದು ರೂಪಾಯಿಗಳಿಂದ ತನ್ನ

ಬಾಳುವೆ ಸಾಗಿಸಿಕೊಂಡು ಹೋಗುವುದೇ ಕಠಿಣವಾಗಿದ್ದಿತು. ಗೋವಿಂದ ನನ್ನು ಓದಲು ಕಳಿಸುವುದು ಅವನಿಗೆ ಸಾಧ್ಯವಾಗಲಿಲ್ಲ. ಗೋವಿಂದನ ಬುದ್ಧಿ ಚುರುಕಾಗಿರುವುದನ್ನು ರಾಮರಾಯರು ಕಂಡರು; ಅವನ ಶಿಕ್ಷಣದ ಹೊರೆಯನ್ನು– ನಸುವೂ ಹಿಂದೆ ಮುಂದೆ ನೋಡದೆ– ತಾವೇ ಹೊತ್ತರು. ಗೋವಿಂದನ ಹೊಟ್ಟೆಬಟ್ಟೆಯ ವೆಚ್ಚ, ವಿದ್ಯಾಭ್ಯಾಸದ ವೆಚ್ಚ, ಎಲ್ಲವನ್ನೂ ಕೇವಲ ನಿಷ್ಕಾಮಬುದ್ಧಿಯಿಂದ ತಾವೇ ಕೊಡುತಲಿದ್ದರು.

ಜಗತ್ತಿನಲ್ಲಿ ಸುಸೂತ್ರವಾಗಿ ಯಾವ ಕೆಲಸವು ಸಾಗುವುದು? ಸಂಗೀತ ಗಾರನು ವೀಣೆಯನ್ನು ಬಾಜಿಸುತ್ತ, ವಿವಿಧಸ್ವರಗಳ ಆಲಾಪನೆಗಳನ್ನು ತೋರಿಸುತ್ತ ಕುಳಿತಿರುವನು. ನೆರೆದ ಜನರೆಲ್ಲರೂ ಹೊರಗಿನ ಜಗತ್ತನ್ನೇ ಮರೆದು, ಆ ವೀಣೆಯ ಸ್ವರದೊಡನೆ ಸಮರಸವಾಗಿ ಹೋಗಿರುವರು. ತನ್ನ ಕಲಾಚಾತುರ್ಯದಿಂದ ಹೊಸ ಹೊಸ ರಾಗಗಳನ್ನು ಹೊರಡಿಸಿ, ಕುಳಿತ ವರ ಕಿವಿಮನಗಳನ್ನು ಇನ್ನಿಷ್ಟು ಎಳೆದುಕೊಳ್ಳಬೇಕೆಂದು ಸಂಗೀತಗಾರನ ಬಯಕೆ. ಜನರಿಗೂ ಕೇಳಬೇಕೆಂದು ಲವಲವಿಕೆ. ಆದರೆ ಇಷ್ಟು ಹೊತ್ತಿನ ವರೆಗೆ ಏಕಪ್ರಕಾರವಾಗಿ ಸಂಗೀತಸುಧೆಯನ್ನು ಸುರಿಸಿದ ವೀಣೆಯ ತಂತಿಯು, ಅದಾವ ಕಾರಣದಿಂದಲೋ ಚಟ್ಟನೆ ಹರಿದುಹೋಗುವುದು. ಎಲ್ಲರಿಗೂ ನಿರಾಶೆಯನ್ನುಂಟು ಮಾಡುವುದು. ಸಂಸಾರಸುಖವಾದರೂ ಈ ವೀಣೆಯ ತಂತಿಯ ಸಂಗೀತದಂತೆಯೆ.

ರಾಮರಾಯರ ಸಂಸಾರವು ಇದುವರೆಗೂ ಸುಖದ ದಾರಿಯಿಂದಲೇ ಸಾಗಿದ್ದಿತು. ಅದೆಂತಹ ಸುಖದ ದಾರಿ? ಅನಂತ ಕಾಲದವರೆಗೂ ಅಗಲ ದಿರುವ ಅಕ್ಷಯಸುಖದ ದಾರಿಯಲ್ಲ; ಮುಗಿಲಲ್ಲಿ ಮಿಂಚು ಮೂಡಿ ಅಡಗಿ ದಂತಹ ಕ್ಷಣಿಕಸುಖದ ದಾರಿ. ವಿಜಯಪುರದಲ್ಲಿ ವಿಷಮಜ್ವರದ ಪಿಡುಗು ಹಬ್ಬಿತು. ರಾಮರಾಯರು ಒಮ್ಮೆಲೆ ಈ ಪಿಡುಗಿನ ಬಾಯಿಗೆ ಬಲಿಯಾದರು. ಹೆಂಡತಿ ಮಕ್ಕಳನ್ನು ಗೋಳಿಗೆ ಗುರಿಮಾಡಿ ಪರಲೋಕಕ್ಕೆ ತೆರಳಿದರು. ರಾಮರಾಯರ ಕುಟುಂಬದ ಮೇಲೆ, ಒಮ್ಮಿಂದೊಮ್ಮೆ ಬರಸಿಡಿಲಿನ ಬಲ ವಾದ ಆಘಾತವಾದಂತಾಯಿತು. ಲಚ್ಚಪ್ಪನ ಮನೆಯವರಿಗೂ ಹೆಚ್ಚಾಗಿ ವ್ಯಸನವೆನಿಸಿತು. ಗೋವಿಂದನಿಗಂತೂ ಮೈಮೇಲೆ ಮುಗಿಲು ಹರಿದು ಬಿದ್ದಂತಾಯಿತು, ದಿಕ್ಕುತಪ್ಪಿದಂತಾಯಿತು; ಏನೆಲ್ಲವೂ— ಆಯಿತು; ಮಾಡುವುದೇನಿದೆ?

ತಂದೆ ತೀರಿದಾಗ ಶಾಮಲೆಗೆ ಇನ್ನೂ ಏಳು ವರ್ಷದ ವಯಸ್ಸು. ಹುಟ್ಟಿದಂದಿನಿಂದಲೂ ಮುದ್ದಿನಲ್ಲಿಯೇ ಬಳೆದ ಮಗು. ದುಃಖದ ಗಾಳಿ ಕೂಡ ಸೋಂಕಿರಲಿಲ್ಲ. ಆದರೆ ರಾಮರಾಯರು ಸಾಯುತ್ತಲೆ ಸೀತಮ್ಮ-ಶಾಮಲೆಯನ್ನು ಕೊರಳಿಗೆ ಕಟ್ಟಿಕೊಂಡು, ಅಪಾರವಾದ ಅಳಲಕಡಲಲ್ಲಿಯೆ ದುಮುಕಿದರು. ಸೀತಮ್ಮನಿಗಾಗ ನೋಡಿದತ್ತೆಲ್ಲ ಕಗ್ಗತ್ತಲೆಯೇ ಕವಿದು ಬಿಟ್ಟದ್ದಿತು. "ಗದ್ದೆಗೆ ತೆವರು ಗಟ್ಟಿಯಿರಬೇಕು. ಹೆಣ್ಣಿಗೆ ತವರು ಗಟ್ಟಿಯಿರಬೇಕು" ಎಂಬುದೊಂದು ಅನುಭವದ ಮಾತು. ಸೀತಮ್ಮನಿಗೆ ತವರುಮನೆಯ ಬೆಂಬಲವೂ ಇರಲಿಲ್ಲ ಮುದುಕಿಯಾದ ತಾಯಿಯೊಬ್ಬಳೂ ಸೀತಮ್ಮನ ಕೊರಳಿಗೆ ಬಿದ್ದಿದ್ದಳು. ಸೀತಮ್ಮನಿಗೇನೂ ತೋಚದಾಯಿತು. ಎಷ್ಟೋ ಬಗೆದು ನೋಡಿದರು. "ಮನೆಗೆ ಬಾಡಿಗೆಕೊಟ್ಟು ವಿಜಯಪುರದಲ್ಲಿ ಇನ್ನು ತಾವೇತಕ್ಕೆ ಇರಬೇಕು!" ಎಂದು ಅವರು ಯೋಚಿಸಿದರು.

ಗದುಗು ಸೀತಮ್ಮನ ತವರೂರು. ಅಲ್ಲಿ ಮತ್ತೇನಿಲ್ಲದಿದ್ದರೂ ಅವರ ತಾಯಿಯ ಸ್ವಂತದ ಮನೆಯೊಂದಿದ್ದಿತು. ಮನೆ ಸಾಧಾರಣ ದೊಡ್ಡದಾಗಿಯೇ ಇದ್ದಿತು. ಬಾಡಿಗೆ ಕೊಟ್ಟರೆ ತಿಂಗಳಿಗೆ ೧೫-೨೦ ರೂಪಾಯಿಗಳು ದೊರೆಯುತ್ತಿದ್ದುವು. ಸೀತಮ್ಮ ಏನೇನನೋ ಯೋಚಿಸಿದರು. ತಾವಿರುವ ಊರನ್ನು ಬಿಟ್ಟು, ಗದುಗಿಗೆ ಹೋಗಿ ಇರಬೇಕೆಂದು ಗಟ್ಟಿಮಾಡಿದರು ಇವರೆಲ್ಲ ಅಗಲಿ ಹೋಗುವರೆಂಬುದನ್ನು ಕಂಡು, ಲಚ್ಚಪ್ಪನ ಮನೆಯವರಿಗೆ ಅದೆಷ್ಟೋ ದುಃಖವೆನಿಸಿತು. ಎನಿಸಿ ಮಾಡುವುದೇನು? ಕಣ್ಣೀರು ಸುರಿಸುವುದರ ಹೊರತು, ಅವರ ಕೈಯಲ್ಲಿ ಇನ್ನೇನೂ ಇರಲಿಲ್ಲ. ಗೋವಿಂದನಿಗಂತೂ ಎಂದೂ ಆಗದಷ್ಟು ವ್ಯಥೆಯಾಯಿತು.

ತಾಯಿ ಶಾಮಲೆಯರನ್ನು ಕರೆದುಕೊಂಡು, ಸೀತಮ್ಮ ಗದುಗಿಗೆ ಬಂದರು. ತಮಗೆ ಇರಲಿಕ್ಕೆಂದು ಮನೆಯಲ್ಲಿ ಕೊಂಚ ಭಾಗವನ್ನಿಟ್ಟುಕೊಂಡು, ಉಳಿದುದನ್ನೆಲ್ಲ ಹದಿನೈದು ರೂಪಾಯಿ ಬಾಡಿಗೆಗೆ ಗೊತ್ತುಮಾಡಿಕೊಟ್ಟರು. ಈ ಬಾಡಿಗೆಯ ಹಣದಿಂದಲೆ, ಅವರ ಬಾಳುವೆಯ ಯಾವುದೆಲ್ಲ ವೆಚ್ಚವೂ ನಡೆಯಬೇಕು. ಸೀತಮ್ಮ ಸಹಿಸುತ್ತಲಿದ್ದ ಕಷ್ಟದ ಕಥೆಯನ್ನೆಲ್ಲ ವಿವರಿಸುತ್ತ ಕುಳಿತರೆ, ಅದೊಂದು ರಾಮಾಯಣವೇ ಆಗಬಹುದು. ಬರಗಾಲದಲ್ಲಿ ಅಧಿಕಮಾಸವೆಂಬಂತೆ, ಸೀತಮ್ಮನ ತಾಯಿ ಅಂತಹ ಕಷ್ಟದ ಕಾಲದಲ್ಲಿಯೇ ತೀರಿದಳು. ಗಾಯದ ಮೇಲೆ ಬರೆಯನೆಳೆದಂತಾಯಿತು.

ಸೀತಮ್ಮನ ಪಡುಪಾಟಿಗೆ ಇನ್ನಿಷ್ಟು ಮೆರುಗುಹಾಕಿದಂತಾಯಿತು. ಒದಗಿದ ದುಃಖಗಳನ್ನೆಲ್ಲ ನುಂಗಿಕೊಂಡು, ಶಾಮಲೆಯ ಸೌಖ್ಯವನ್ನು ಹಗಲಿರುಳೂ ಚಿಂತಿಸುತ್ತ, ಕ್ಷಣವನ್ನು ದಿನವಾಗಿ ಎಣಿಸಿ, ಸೀತಮ್ಮ ಕಷ್ಟದಿಂದ ಕಾಲಹರಣ ಮಾಡುತ್ತಿದ್ದರು.

೨

ಕೃಷ್ಣನಾಯಕರು ಗದುಗಿನ ಸಿರಿವಂತರ ಎಣಿಕೆಯಲ್ಲಿ ಬರುವವರು. ಅವರಿಗೆ ಭೂಮಿ ಸೀಮೆ ಬೇಕಾದಷ್ಟಿದೆ. ಮನೆಯಲ್ಲಿ ಕೊರತೆಯೇತರದೂ ಇಲ್ಲ. ಚಿನ್ನ ಬೆಳ್ಳಿಯ ವ್ಯವಹಾರದ ದೊಡ್ಡ ಅಂಗಡಿಯುಂಟು. ಕೃಷ್ಣನಾಯಕರ ಹಿರಿಯ ಮಗನ ಹೆಸರು ಶಶಿಧರ. ಅವನಿಗೀಗ ಇಪ್ಪತ್ತು ವರ್ಷದ ಪ್ರಾಯ. ಚೆಲುವಾದ ತುಂಬುಮೊಗ, ಕಳೆಯುಳ್ಳ ಕಣ್ಣು, ಹೊಳೆಯುವ ಮೈಬಣ್ಣ, ಪುಷ್ಟವಾದ ದೇಹ, ಮೊದಲಾದವುಗಳಿಂದ ಶಶಿಧರನ ಚೆಲುವಿಕೆಯು ನೋಟಕರ ಎದೆಯನ್ನೆಳೆಯದಿರದು. ಶಶಿಧರನು ರಸಿಕನೂ ಅಹುದು. ಮನಸ್ಸು ದೊಡ್ಡದು. ಹೃದಯವು ಹೂವಿನಂತಹದು. ತುಂಬ ವಿನಯಶಾಲಿ. ಮಾತನಾಡಿದರೆ ಸಕ್ಕರೆಯ ಮಳೆ ಸುರಿದಂತೆ. ಪ್ರವೇಶಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಎರಡು ವರ್ಷವಾಗಿದ್ದಿತು. ವ್ಯಾಪಾರದಲ್ಲಿ ಸೇರಬೇಕೆಂದು ಮನವಿದ್ದುದರಿಂದ, ಆತನು ಮುಂದೆ ಕಲಿಯಲು ಹೋಗಲಿಲ್ಲ. ಮನೆಯಲ್ಲಿಯೇ ಇರುತ್ತಿದ್ದನು.

ಶಾಮಲೆಗೆ ೧೩ ವರ್ಷ ತುಂಬಿದುವು. ಇನ್ನೂ ಪಾಠಶಾಲೆಗೆ ಹೋಗುವಳು. ಅವಳು ಈಗ ಓದುತಿದ್ದುದು, ಇಂಗ್ಲಿಷ್ ಮೂರನೆಯ ವರ್ಗದಲ್ಲಿ. ತಮಗೆಷ್ಟು ಬಡತನವಿದ್ದರೂ, ಶಾಮಲೆಯ ಸುಖದ ಕಡೆಗೆ ಸೀತಮ್ಮ ಹೆಚ್ಚಾಗಿ ನೋಡುವರು. ತಾವು ಉಪವಾಸವಿದ್ದಾದರೂ ಶಾಮಲೆಯ ಬಯಕೆ ಸಲ್ಲಿಸುವರು. ಶಕ್ಯವಿದ್ದಷ್ಟು ಹೆಣಗಿ, ಅವಳ ಕೊರತೆಯನ್ನು ಪರಿಹರಿಸುವರು. ಶಾಮಲೆಯು ನಗುತ್ತಲಿದ್ದರೆ, ಸೀತಮ್ಮನಿಗೆ ದುಃಖದಲ್ಲಿಯೇ ಕೊಂಚ ಸುಖ. ಕರಿಗತ್ತಲೆಯಲ್ಲಿ ಕಿರುತಾರೆಗಳನ್ನು ಕಂಡಂತಾಗುವುದು. ಅವಳು ಸಣ್ಣ ಮೋರೆ ಮಾಡಿದುದು ಕಂಡರೆ ಸೀತಮ್ಮನೆದೆಗೆ ಸಿಡಿಲು ಬಡಿದಂತಾಗುವುದು. ಲೋಭಿಯು ತನ್ನ ದ್ರುವ್ಯವನ್ನು ಮರಳಿ ಮರಳಿ ನೋಡುತಿರುವಂತೆ, ಶಾಮಲೆಯನ್ನೆಷ್ಟು ಸಲ ನೋಡಿದರೂ

ದರೂ ಕಾಣುವೆವೇನವ್ಮಾ!" ಕಂಬನಿಗರೆಯುತ್ತ, ಬಿಗಿದ ಕಂಠದಿಂದ ಸೀತಮ್ಮ ನುಡಿದರು.

"ಅಮ್ಮಾ, ದೇವರು ಕಣ್ಣು ತೆರೆದು ನೋಡಿದರೆ, ಯಾವುದು ತಾನೇ ಅಸಾಧ್ಯ? ಕತ್ತಲೆಯನ್ನು ಮಾಡಿದ ಆ ಮಾಟಗಾರನೇ ಅದರ ಮುಂಡೆ ಬೆಳಕನ್ನುಂಟುಮಾಡುತಿರುವನಲ್ಲವೇ?" ಶಾಮಲೆಯು ಬಾಯಿಂದಲೇನೋ ಸಂತವಿಡುವ ಮಾತನಾಡಿದಳು. ಕಣ್ಣಲ್ಲಿ ನೀರು ತುಳುಕುತಿದ್ದಿತು.

"ಏನು ಕತ್ತಲೆಯೋ ಏನು ಬೆಳಕೋ! ಎಂದೂ ಬೆಳಗಾಗದ ಕತ್ತಲೆಯಲ್ಲಿ ನನ್ನನ್ನು ಕಾಲುಕಟ್ಟಿ ಕೆಡಹುವಂತಹ ಪಾಪವನ್ನು, ನಾನೇನು ಮಾಡಿರಬಹುದಮ್ಮಾ! ಶಾಮಾ! ಜಗತ್ತನ್ನೆಲ್ಲ ಕಣ್ದೆರೆದು ನೋಡುತಿರುವ ಪರಮಾತ್ಮನು, ನನ್ನನ್ನೊಬ್ಬಳನ್ನೇ ಮಾತ್ರ ನೋಡದಿರುವುದಕ್ಕೆ ಕಾರಣ ವೇನು? ಎಡವಿದ ಬೆರಳು ಮರಳಿ ಮರಳಿ ಎಡವಿದಂತೆ, ಒಂದರಹಿಂದೊಂದು ದುಃಖದ ಪರ್ವತಗಳನ್ನು,— ನನ್ನನ್ನೆದುರಿಸಲು ದೇವದೇವನು ಅದೇತಕ್ಕೆ ಕಳುಹಿಸುತ್ತಿರಬಹುದು? ಶಾಮಲೇ! ವಿಧಿಯ ಆಟವನ್ನು ನೋಡಿದೆಯಾ? ಎಲ್ಲಿಯೂ ಇಲ್ಲದೆ ನಮ್ಮ ಮನೆಯಲ್ಲಿಯೆ ಇಲಿಗಳು ಬೀಳಬೇಕೆ? ಬಂದಷ್ಟು ಬಾಡಿಗೆಯ ಹಣದಲ್ಲಿ ಗಂಜಿಯನ್ನಾದರೂ ಕುಡಿದು ಬದುಕಿಕೊಂಡಿರ ಬೇಕೆಂದರೆ, ಖೋಡಿ ದೈವಕ್ಕೆ ಅದೂ ಸಹನವಾಗಲಿಲ್ಲ. ದುರ್ದೈವಾ! ಇಷ್ಟು ನನ್ನನ್ನು ಕೊರಗಿಸುವುದಕ್ಕಿಂತಲೂ ಒಮ್ಮೆಲೆ ನನ್ನನ್ನು ನುಂಗಿಯೆ ಬಿಡಬಾರದೇ? ನೀನು ನುಂಗುವುದಕ್ಕೆ ಮೊದಲು ನಾನೇ ನಿನ್ನ ಬಾಯಿಗೆ ಬಲಿಯಾಗಬೇಕೆಂದರೆ, ಈ ಸುಟ್ಟ ತಾಯಿಯ ಕರುಳು ತೊಳಲಾಡುತ್ತಿದೆ..." ಸೀತಮ್ಮ ಗಟ್ಟಿಯಾಗಿ ಅಳಲು ತೊಡಗಿದರು. ಸೆರಗಿನಿಂದ ಮುಖಮುಚ್ಚಿ ಕೊಂಡರು. ಅಳುವ ದನಿಯನ್ನು ಮಂದಿ ಕೇಳಿದರೆ ನಗೆಗೀಡೆಂದು, ಮರಳಿ ದುಃಖವನ್ನು ನುಂಗಿಕೊಂಡರು. ಶಾಮಲೆಯ ಮುಖವೀಗ, ಕಂದಿ ಕುಂದಿ ಹೋಗಿದ್ದಿತು. ಕಣ್ಣೀರು ಹಳ್ಳವಾಗಿ ಹರಿಯುತಲಿದ್ದಿತು.

"ಅಮ್ಮಾ! ಇಲಿಬಿದ್ದು ನಾಲ್ಕು ತಿಂಗಳಾಗಿ ಹೋಯಿತಲ್ಲವೇ? ಬಾಡಿಗೆಯವರು ಯಾರೂ ಇನ್ನೂ ಏಕೆ ಬರಲೊಲ್ಲರು?" ಶಾಮಲೆಯು ಕಂಪಿಸುವ ದನಿಯಿಂದ ಕೇಳಿದಳು.

"ಏಕೆ ಬರಲೊಲ್ಲರೇ? ನಮ್ಮ ಪಾತಕವು ನಮ್ಮ ನೆರವಿಗೆ ಯಾರನ್ನೂ

ಬರಗೊಡಲೊಲ್ಲದು-ಕಂದ! ನಮ್ಮ ಮನೆಯಲ್ಲೇನೋ ಭೂತವಿದೆಯೆಂದು, ಆದಾರೋ ದುಷ್ಟರು ಹುಯಿಲನ್ನು ಎಬ್ಬಿಸಿರುವರು. ಎಂತಲೇ ಹೆದರಿ ಜನ ರಾರೂ ಮನೆಯಲ್ಲಿರಲು ಬರಲೊಲ್ಲರು. ಮಗು! ನನ್ನ ಮೈಮೇಲಿದ್ದ ನಾಲ್ಕಾರು ಚೂರುಚಾರು ಒಡವೆಗಳು, ತಾಯಿಯ ಉತ್ತರಕ್ರಿಯೆಗಾಗಿ ಹೋಗಿಬಿಟ್ಟುವು; ಈಗ ಬಾಡಿಗೆ ಬರುವುದು ಕಟ್ಟಾಯಿತು; ಮಧ್ಯಾಹ್ನದ ನುಚ್ಚಿಗೆ ತೊಂದರೆ ಬಂದು ಕುಳಿತಿತು. ಶಾಮಾ! ನೀನೀಗ ಬಳೆದುನಿಂತೆ. ಮದುವೆಯ ಹೊರೆಯೊಂದು ಬೆಟ್ಟದಷ್ಟು ಭಾರವಾಗಿ ಮೈಮೇಲೆ ಬಿದ್ದಿದೆ. 'ಮಗಳು ಮೈನೆರೆಯಲಿಕ್ಕಾದಳು. ಇನ್ನೂ ಮದುವೆಯ ಸುದ್ದಿಯೇ ಇಲ್ಲ' ಎಂದು ಜನರಾಡುವ ಕೊಂಕು ನುಡಿಗಳು, ಶೂಲದಂತೆ ಹೃದಯವನ್ನು ಭೇದಿಸತೊಡಗಿವೆ. ನಿನ್ನ ಭಾವೀ ಜೀವನದ ಬಗೆಯನ್ನು ನೆನೆದರೆ, ಎದೆಯಲ್ಲಿ ಕಾದ ಸೀಸದ ರಸವನ್ನು ಸುರಿದಂತಾಗುವುದು. ತಾಯೀ! ಬರಬಾರದಮ್ಮಾ ಬರಬಾರದು-ನನ್ನಂತಹ ಸಂಕಟದ ವೇಳೆಯು, ನನ್ನನ್ನು ಕೊಂದ ವೈರಿಗೆ ಕೂಡ ಬರಬಾರದು...." ಸೀತಮ್ಮ ಎರಡೂ ಕೈಗಳಿಂದ ಮೋರೆ ಮುಚ್ಚಿ ಕೊಂಡು, ಬಿಕ್ಕಿ ಬಿಕ್ಕಿ ಅಳಲು ತೊಡಗಿದರು. ಶಾಮಲೆಯು ಈಗ ತೀರ ಅಧೀರೆಯಾದಳು. ಬೊಗಸೆಗಣ್ಣುಗಳಿಂದ ಕಂಬನಿಯ ಕಾಲುವೆ ಹರಿಸುತ್ತ ಏನನೂ ಮಾತನಾಡದೆ, ತಾಯಿಯ ಕಡೆಗೆ ನೋಡುತ್ತ ಕುಳಿತಳು. ಕೆಲವು ವೇಳೆಯ ವರೆಗೆ ಪರಸ್ಪರರ ಕಂಬನಿ ಬೆರೆತ ಕಣ್ಣುಗಳೇ ಶಬ್ದವಿಲ್ಲದ ಮಾತ ನಾಡಿದುವು. ಶಾಮಲೆಯು ನಿಡಿದಾಗಿ ಉಸಿರು ಹಾಕಿದಳು.

"ಅಮ್ಮಾ! ನಾನು ಹುಟ್ಟದಿದ್ದರೆ ನಿನಗಿಷ್ಟು ತೊಂದರೆಯಾಗುತಿರ ಲಿಲ್ಲ ನೋಡು! ನೀನು ಇಷ್ಟು ಕಷ್ಟಪಡುತಿರುವುದು ನನಗಾಗಿಯೇ ಅಲ್ಲವೇ? ಅಮ್ಮಾ! ನಿಜವಾಗಿ ಹೇಳು! ನಾನೀಗ ಸತ್ತರೆ ನಿನಗೆ ಹೆಚ್ಚು ದುಃಖವೋ? ಜೀವಿಸಿದ್ದರೆ ಹೆಚ್ಚು ದುಃಖವೋ?" ಶಾಮಲೆಯು ತುಟಿ ಯಲುಗಿಸುತ್ತ, ಬಿಗಿದ ಕಂಠದಿಂದ ಕೇಳಿದಳು.

"ಒಳಿತನ್ನು ಕಂದಾ! ಹೀಗೆಲ್ಲ ಹುಚ್ಚುಹುಚ್ಚು ಮಾತುಗಳನ್ನಾಡ ಬಾರದಮ್ಮಾ! ಮಗೂ, ನಿನ್ನ ಕೋಮಲಜೀವದ ಮುಂದೆ, ನನ್ನ ಬಾಳಿನ ಬೆಲೆಯೇನು? ನಿನ್ನ ಸೌಖ್ಯಕ್ಕಾಗಿ ನಾನು ಅಳುತಿರುವೆನಲ್ಲದೆ, ನನಗೇನು ಬೇನೆಯಮ್ಮಾ! ಅಯ್ಯೋ! ನಾನು ಹುಚ್ಚಿ. ಏನೇನನೋ ಹೇಳಿ, ಅತ್ತು ಕರೆದು, ಬೆಳೆಯುವ ಕಂದಮ್ಮನನ್ನು ಬೆದರಿಸಿ ಬಿಡುತ್ತಿದ್ದೇನೆ. ನನಗೇನೂ

ತಿಳಿಯದು." ಸೀತಮ್ಮ ಅಳುವನ್ನು ತಡೆದು, ಸೋಗಿನ ಸಮಾಧಾನದಿಂದ ನುಡಿದರು.

"ಅಮ್ಮಾ! ನಾನಿನ್ನೂ ಮೊಲೆಯುಣ್ಣುವ ಎಳೆಗೂಸೇ? ನನಗೇನೂ ತಿಳಿಯುವುದಿಲ್ಲವೇ? ಮನೆಯಲ್ಲಿ ಒಂದರ ಹಿಂದೊಂದು ಒದಗುತಿರುವ ಕಷ್ಟಗಳು ನನ್ನ ಕಣ್ಣಿಗೆ ಕಾಣುವದಿಲ್ಲವೆ? ನೀನು ಪಡುವ ಸಂಕಟವನ್ನು, ಕಂಡೂ ಕಾಣದವಳಂತೆ ಕಣ್ಣು ಮುಚ್ಚಿಕೊಂಡಿರುವುದು ನನ್ನಿಂದಾದೀತೆ? ನಿನ್ನ ಎದೆಯುರಿಯನ್ನು ಎಷ್ಟೆಂದು ನೋಡಲಮ್ಮಾ......... " ಅಳುವು ಉಕ್ಕೇರಿ ಬಂದುದರಿಂದ ಶಾಮಲೆಗೆ ಮುಂದೆ ಮಾತನಾಡುವುದಾಗಲಿಲ್ಲ.

"ನನ್ನ ಕಷ್ಟಗಳು ನನ್ನ ಕೂಡ ಮುಗಿದು ಹೋಗಲಿ ತಾಯೀ! ನೀನಾದರೂ ಸೌಖ್ಯವಾಗಿರು." ಸೀತಮ್ಮ ಕನಿಕರದ ದನಿಯಿಂದ ನುಡಿದರು.

"ಅಮ್ಮಾ, ನಿನ್ನ ಪಡುಪಾಟಲನ್ನು ಕಂಡು, ಇನ್ನು ನನ್ನಿಂದ ಸೈರಿಸುವುದಾಗದು. ನನ್ನ ಊಟದ ಚಿಂತೆ ನಿನಗೆ, ನನ್ನ ಉಡಿಗೆಯ ಚಿಂತೆ ನಿನಗೆ, ನನ್ನ ಮದುವೆಯ ಚಿಂತೆ ನಿನಗೆ, ನನ್ನ ಮುಂದಿನ ಬಾಳುವೆಯ ಚಿಂತೆ ನಿನಗೆ. ನನಗಾಗಿ ಎಷ್ಟು ಸಂತಾಪವಮ್ಮಾ! ನಾನು ಮಗಳಲ್ಲ. ಹೊಟ್ಟೆಯಿಂದ ಹುಟ್ಟಿಬಂದ ವೈರಿ! ನಾನು ನಿನ್ನ ಸುಖಕ್ಕಾಗಿ ಹುಟ್ಟಿ ಬಂದಿಲ್ಲ, ಆಳಲ ಹೊಳೆಯಲ್ಲಿ ಅದ್ದಿ ಅದ್ದಿ ತೆಗೆಯಲಿಕ್ಕೆ! ತಾಯಿ! ಯಾವ ಸುಖಕ್ಕಾಗಿ ನನ್ನನ್ನು ಹಡೆದೆ?" ಶಾಮಲೆಯು ಗಟ್ಟಿಯಾಗಿ ಅಳಲು ತೊಡಗಿದಳು.

"ಅಳು! ಕಂದಮ್ಮ! ಅಳು!! ನನ್ನ ಅಳುವ ಸರದಿ ಮುಗಿಯಿತು. ಈಗ ನಿನ್ನದು ಬಂದಿತು. ಬದುಕಿರುವ ವರೆಗೂ ಹೀಗೆಯೆ ಎದುರೆದುರಾಗಿ ಕುಳಿತು, ಸರದಿಯಂತೆ ನಾವಿಬ್ಬರೂ ಅಳೋಣ. ಇದೇನು ಸಾಮಾನ್ಯ ಸುಖವೇ? ಈ ಸುಖಕ್ಕಾಗಿಯೇ ನಿನ್ನನ್ನು ಹೆತ್ತೆ. ಶಾಮಾ! ನಿನ್ನ ಜನ್ಮವೂ ನನ್ನಂತೆಯೇ ಅಳುವಿನಲ್ಲಿಯೇ ಬೆಳಗಾಗುವುದೇನೇ? ಇಲ್ಲ! ಇಲ್ಲ! ಹೀಗೆಂದಿಗೂ ಆಗದು. ಅಳುವುದಕ್ಕಾಗಿಯೇ ಈ ಜಗತ್ತಿನಲ್ಲಿ ಹುಟ್ಟಿ ಬಂದಿರುವ, ಪಾಪಿನಿಯಾದ ನನ್ನ ಮಗಳಲ್ಲ ನೀನು. ಆಜನ್ಮವೂ ನಗುತಲಿದ್ದು, ಒಡನಾಡಿಗಳೆಲ್ಲರನ್ನೂ ನಗಿಸಿ, ಸತ್ತು ಸ್ವರ್ಗವಾಸಿಯಾಗಿ, ಅಗೋ ನೋಡು! ಅಲ್ಲಿ ಮುಗಿಲಲ್ಲಿ ನಕ್ಷತ್ರವಾಗಿ ನಿಂತು ಒಂದೇಸವನೆ ನಗುತ್ತಲಿರುವನಲ್ಲ! ಆ ನಗೆಗಾರನ ಮಗಳು. ನೀನೇಕೆ ಅಳುವೆ? ಎಲ್ಲರ ಪಾಲಿನದೂ ನನಗೇ ಇರಲಮ್ಮಾ—ನನಗೇ ಇರಲಿ!" ಸೀತಮ್ಮ ಬಿಸಿಯಾಗಿ

ಸುಯ್ಯುತ್ತ, ಕಣ್ಣೊರಸುತ್ತ, ನುಡಿದರು. ಶಾಮಲೆಯು ಅಳುವನ್ನು ತಡೆ ಹಿಡಿದಳು.

"ಅಮ್ಮಾ ನಾನೊಂದು ಮಾತನ್ನು ಹೇಳಬೇಕೆನ್ನುತ್ತೇನೆ. ದಯೆಯಿಟ್ಟು ಅದನ್ನು ಕೇಳುತ್ತೀಯಾ" ದೈನ್ಯಮುದ್ರೆಯಿಂದ ಕೇಳಿದಳು.

"ಅದಾವ ಮಾತು ಮಗೂ!" ಸೀತಮ್ಮ ಆತುರದಿಂದ ಕೇಳಿದರು.

"ನೋಡು, ಸದ್ಯಕ್ಕೆ ನಾವು ಬದುಕಿಕೊಂಡಿರುವುದಕ್ಕೇ ಬಾರದಂತಹ ತೊಂದರೆಯಲ್ಲಿದ್ದೇವೆ. ಅದರಲ್ಲಿಯೂ ನನ್ನ ಮದುವೆಯು ಹೊರೆಯೊಂದು, ನಿನ್ನ ತಲೆಯ ಮೇಲೆ ಬೆಟ್ಟವನ್ನಿಟ್ಟಂತಾಗಿದೆ. ಗುಂಡಾಭಟ್ಟರು ನಿನಗೆ ಹೇಗೂ ಹೇಳುತ್ತಿದ್ದರಲ್ಲ! — 'ದೇಸಾಯಿ ವೆಂಕಟರಾಯರಿಗೆ ಶಾಮಲೆಯನ್ನು ಕೊಟ್ಟರೆ, ನಿಮಗೆ ಸಾವಿರ ರೂಪಾಯಿ ಕೊಡಿಸುವೆನು' ಎಂದು !! ಅವರ ಮಾತಿನಂತೆ ನನ್ನನ್ನು ವೆಂಕಟರಾಯರಿಗೆ ಮದುವೆ ಮಾಡಿ ಕೊಟ್ಟು ಬಿಡು. ಎಂದರೆ ಎರಡೂ ತೊಡಕಿನಿಂದ ನಿನ್ನನ್ನು ಪಾರುಮಾಡಿದ ಶ್ರೇಯಸ್ಸು ನನಗೆ ಸಿಕ್ಕುವುದು. ಮಗಳಾಗಿ ಹುಟ್ಟಿ ಬಂದುದಕ್ಕೆ, ನೀನು ಹೊಟ್ಟೆ ತುಂಬ ಉಂಡು ತಿಂದುದನ್ನು, ಒಮ್ಮೆಯಾದರೂ ಈ ಕಣ್ಣಿನಿಂದ ನೋಡಬೇಕೆನ್ನುತ್ತೇನೆ. ಅಮ್ಮಾ! ನಿನ್ನ ಕಾಲು ಬಿದ್ದು ಬೇಡಿಕೊಳ್ಳುವೆನು. ನನ್ನದಿದೊಂದು ಮಾತು ಕೇಳು. ವೆಂಕಟರಾಯರಿಗೆ ನನ್ನನ್ನು ಕೊಟ್ಟು ಬಿಡು" ಈ ಮಾತನ್ನು ಆಡುತ್ತಿರುವಾಗಿನ ಶಾಮಲೆಯ ದೀನತೆಯನ್ನು ಬಣ್ಣಿಸಿ ಹೇಳುವುದು ಅಸಾಧ್ಯ.

ಸೀತಮ್ಮ ಮಗಳ ಮಾತನ್ನು ಕೇಳಿದರು. ದುಃಖವು ಉಕ್ಕೇರಿ ಬಂದಿತು. "ಚಾಂಡಾಲಿನೀ, ಶಾಮಲೇ! ನೀನು ಇಷ್ಟು ದಿನ ಚಿಕ್ಕವಳಿದ್ದೆ, ಚೆನ್ನಾಗಿತ್ತು ನೋಡು. ನೀನು ಏತಕ್ಕೆ ದೊಡ್ಡವಳಾದೆಯೋ? ನಾನೇನು ರಕ್ಕಸಿಯೆಂದು ತಿಳಿದಿರುತ್ತೀಯೋನೇ? ಹೋದ ಜನ್ಮದಲ್ಲಿ ಮಾಡಿದ ದುಷ್ಕರ್ಮದ ಪರಿಪೂರ್ತಿಯಾಗಿಲ್ಲವೇನೇ? ಹಡೆದವ್ವಾ! ಎಂತಹ ಮಾತನಾಡಿದೆಯೋ? ಆ ಅರುವತ್ತು ವರ್ಷದ ಮುದಿಹದ್ದಿಗೆ ನಿನ್ನನ್ನು ಕೊಟ್ಟು, ನಾನು ಸಾವಿರ ರೂಪಾಯಿ ತೆಗೆದುಕೊಂಡು, ಹಾಲು ಬೋನವುಂಡು ಲೋಲಾಡಲಾ? ಅದಕ್ಕಿಂತಲೂ ಒಬ್ಬರ ಕೈಯನೊಬ್ಬರು ಹಿಡಿದುಕೊಂಡು, ಇಬ್ಬರೂ ಒಮ್ಮೆಲೇ ಬಾವಿಯಲ್ಲಿ ಹಾರಿಕೊಂಡರೆ, ಆಗುವ ಕೇಡೇನು? ಶಾಮಾ! ಇಲ್ಲದುದೊಂದು ಯೋಚಿಸಿ ಹಣ್ಣಾಗಬೇಡವ್ವಾ?" ಸೀತಮ್ಮ

ಅಳುತ್ತಳುತ್ತಲೇ ನುಡಿದರು. ಶಾಮಲೆಯನ್ನು ಗಟ್ಟಿಯಾಗಿ ಅಪ್ಪಿಕೊಂಡರು. ಪ್ರೇಮದಿಂದ ಮೈದಡವಿದರು. ಮತ್ತೆ ಮಾತನಾಡಲು ತೊಡಗಿದರು.

"ಶಾಮಾ! ವಿಧಿಯು ನಮ್ಮನ್ನು ಯಾವ ಯಾವ ರೂಪದಿಂದ ಕಾಡುತ್ತಿರುವುದೆಂಬುದು ತಿಳಿಯದಾಗಿದೆ. ತನ್ನ ಮಾತು ಕೇಳಿ, ವೆಂಕಟ ರಾಯರಿಗೆ ನಿನ್ನನ್ನು ಕೊಡಲಿಲ್ಲವೆಂದು, ಗುಂಡಾಭಟ್ಟನು ಕೈ ತೊಳೆದು ಕೊಂಡು ಬೆನ್ನಹತ್ತಿರುವನು. ಹರಿಶ್ಚಂದ್ರನನ್ನು ವಿಶ್ವಾಮಿತ್ರನು ಕಾಡಿದಂತೆ ಪರಿಪರಿಯಿಂದ ಕಾಡುತ್ತಿರುವನು. ನಮ್ಮ ಮನೆಯಲ್ಲಿ ಭೂತವಿದೆಯೆಂದು ಹುಯಿಲೆಬ್ಬಿಸಿ, ಬಾಡಿಗೆಯವರು ಬರದಂತೆ ಮಾಡಿದವನು, ಆ ಬ್ರಹ್ಮರಾಕ್ಷಸನೇ. ಮೊದಲು ಸತ್ತ ಇಲಿಯನ್ನು ತಂದು ಮನೆಯಲ್ಲಿ ಚೆಲ್ಲಿದವನೂ ಅವನೇ ಎಂದು ಕಾಣುವುದು. ಈಗ ದಿನದಿನಕೊಂದು ದುರ್ವಾರ್ತೆಯನ್ನು ಹಬ್ಬಿಸಿ, ನಮ್ಮ ಹೆಸರಿಗೆ ಹೊಲಸು ಬಳಿಯುತ್ತಿರುವವನೂ ಆ ಹೊಲೆಯನೇ. ಆ ನೀಚನು ಶಶಿಧರನ ತಂದೆಗೂ ಏನೇನನೋ ಹೇಳುತ್ತಿರುವನೆಂತೆ. ಆಗಲಮ್ಮಾ! ಕಾಡುವವರೆಲ್ಲ ಇದೇ ಜನ್ಮದಲ್ಲಿ ಕಾಡಿ ತೀರಿಸಿಕೊಳ್ಳಲಿ. ದೇವರು ನನ್ನ ಮೊರೆಯನ್ನು ಕೇಳಿ ನಿನಗಾದರೂ ಸುಖದ ದಾರಿಯನ್ನು ತೋರಿಸಿದರೆ, ನಾನು ಸಂತೋಷದಿಂದ ಕಣ್ಣು ಮುಚ್ಚಿಕೊಳ್ಳುವೆನು. ಏಳು ಮಗೂ! ರಾತ್ರಿ ಹನ್ನೊಂದು ಗಂಟೆಯಾಯಿತು. ನಿದ್ರೆ ಬಂದಿಲ್ಲವೇ? ಮಲಗಿಕೊಳ್ಳು! ನಡೆ! ನನ್ನ ಕರ್ಮದ ಕಥೆಯ ಕೊನೆಯೆಂದೋ ತಿಳಿಯದಾಗಿದೆ. ಅದನ್ನು ನೆನೆದು ನೀನೇನೂ ಕೊರಗಬೇಡವಮ್ಮಾ! ಏಳು." ಎಂದು ನುಡಿದು ಸೀತಮ್ಮ ಕಳವಳದಿಂದ ಮಗಳ ಕೈಹಿಡಿದೆಬ್ಬಿಸಿ, ಹಾಸಿಗೆಯ ಮೇಲೆ ಮಲಗಿಸಿದರು. ಹೊದಿಕೆ ಹೊಚ್ಚಿ, ಮೈಮೇಲೆ ಕೈಯನ್ನಾಡಿಸುತ್ತ, ಎಷ್ಟೋ ವೇಳೆಯ ವರೆಗೆ ಕುಳಿತುಕೊಂಡೇ ಇದ್ದರು. ಶಾಮಲೆಯೇನೂ ಮಾತನಾಡದೆ ಮಲಗಿದ್ದಳು. ಅವಳಿಗೆ ನಿದ್ರೆ ಹತ್ತಿರಬಹುದೇನು?

೬

ಮರುದಿನ ರವಿವಾರ. ಪಾಠಶಾಲೆಗಳಿಗೆಲ್ಲ ಬಿಡುವು. ಅಂದು ಶಾಮಲೆಯು ಮನೆಯಲ್ಲಿಯೇ ಇದ್ದಳು. ಹಗಲು ನಾಲ್ಕು ಗಂಟೆಯ ಸಮಯ. ಸೀತಮ್ಮ ಮನೆಯಲ್ಲಿರಲಿಲ್ಲ. ಶಾಮಲೆಯು ಮನೆಯ ಬಾಗಿಲನ್ನು ಮುಂದೆ ಮಾಡಿಕೊಂಡು, ಅದೇನನೋ ಯೋಚಿಸುತ್ತ

ಮುಂದಿನ ಪಡಸಾಲೆಯಲ್ಲಿಯೇ ಮಲಗಿಕೊಂಡಿದ್ದಳು. ಕಿಡಿಕಿಯ ಬಾಗಿಲುಗಳೆರಡೂ ತೆರೆದಿದ್ದುವು. ಹಠಾತ್ತಾಗಿ ಶಶಿಧರನು ಅಲ್ಲಿಗೆ ಬಂದನು. ಮುಂಬಾಗಿಲು ಇಕ್ಕಿದ್ದಿತು. ಕಿಡಿಕಿಯೊಳಗಿಂದ ಒಳಗೆ ಇಣಿಕಿ ನೋಡಿದನು. ಅದಾವುದೋ ಗಹನವಾದ ಆಲೋಚನೆಯಲ್ಲಿ ಶಾಮಲೆಯು ಮಲಗಿದುದನ್ನು ಕಂಡನು. ಹೊರಗಣ ಅರಿವೇ ಇಲ್ಲದೆ, ಅಂತರಂಗದ ಚಿಂತೆಯಲ್ಲಿ ಸಾಮರಸ್ಯಹೊಂದಿ, ಚಿತ್ರದಲ್ಲಿಯ ಪ್ರತಿಮೆಯಂತೆ ಕದಲದೆ ಮಲಗಿದ್ದ ಶಾಮಲೆಯನ್ನು ಶಶಿಧರನು ಕಣ್ಣಲುಗಿಸದೆ ನೋಡಿಯೇ ನೋಡಿದನು.

ಶಾಮಲೆಯು ಸ್ವಾಭಾವಿಕವಾಗಿಯೇ ಸೌಂದರ್ಯವತಿ. ಅದರಲ್ಲಿಯೂ ಅವಳ ಅಂಗಾಂಗಗಳು, ಇದೀಗ ಎಳೆಯತನದ ಮೇರೆಯನ್ನು ಮೀರುತ್ತ ನಡೆದಿದ್ದುವು. ಕಿಡಿಕಿಯಿಂದ ಒಳಗೆ ಹೋಗುತ್ತಿರುವ ಸುಳಿಗಾಳಿಯಿಂದ, ಮೆಲ್ಲಗೆ ಅಲುಗಾಡುತಿರುವ ಕೊಂಕು ಕುರುಳುಗಳೂ, ಯೋಚನೆಯಿಂದ ಸ್ಥಿರದೃಷ್ಟಿಯನ್ನು ತಳೆದ ಕಳೆಯುಳ್ಳ ಕಣ್ಣುಗಳೂ, ಚೆಲುವಿನ ನೆಲೆಯಾದ ಕೆನ್ನೆಗಳೂ, ಮುದ್ದುಮುದ್ದಾದ ಬಣ್ಣದುಟಿಯ ಬಾಯಿಯೂ, ಹರವಾದ ಹಣೆಯೂ, ಹಣ್ಣುನಿಂಬೆಯಂತಹ ಮೈಯ್ಯಬಣ್ಣವೂ, ಪುಷ್ಟವಾದ ತೋಳನ್ನು ತಲೆಗಿಂಬಾಗಿಟ್ಟುಕೊಂಡು ಮಲಗಿದ್ದ ಭಂಗಿಯೂ ಶಶಿಧರನ ಕಣ್ಮನಗಳನ್ನು ಸೆಳೆದುಬಿಟ್ಟುವು. ಅವನನ್ನು ಸಂಭ್ರಾಂತನನ್ನಾಗಿ ಮಾಡಿದುವು. ಅಂದಿನ ಶಾಮಲೆಯನ್ನು ಕಂಡು, ಶಶಿಧರನು ಮನದಲೆಷ್ಟೆಷ್ಟೋ ರೂಪಕಗಳನ್ನೂ ಉತ್ಪ್ರೇಕ್ಷೆಗಳನ್ನೂ ಮಾಡಿದನು. "ವೇದಮಾತೃವಾದ ಗಾಯತ್ರೀ ಮಂತ್ರವನ್ನು ಕಂಡುಹಿಡಿಯುವ ಸಾಧನೆಯಾವುದೆಂಬುದನ್ನು ಯೋಚಿಸುತ್ತ ಮಲಗಿರುವ ಶಾರದೆಯೋ ಇವಳು?" ಎಂದನು. "ಶಂಬರಾಸುರನ ಮನೆಯಲ್ಲಿದ್ದುಕೊಂಡು, ಅಗಲಿ ಹೋದ ತನ್ನ ಪತಿಯನ್ನೆಂದು ಕೂಡುವೆನೋ? ಎಂದು ಚಿಂತಿಸುತ್ತ ಮಲಗಿದ್ದ ನಿರ್ಜರೆಯಾದ ರತಿಯೇ ಇವಳು" ಎಂದು ಮನದಲ್ಲಿ ಎಂದುಕೊಂಡನು. ಎಷ್ಟು ನೋಡಿದರೂ ಕಣ್ಣಿಗೆ ತಣಿವು ಇಲ್ಲ. ಮನಸ್ಸಿಗೆ ತೃಪ್ತಿಯಿಲ್ಲ. ಶಾಮಲೆಗೆ, ಶಶಿಧರನು ಬಂದು ನಿಂತು ತನ್ನನ್ನು ನೋಡುತ್ತಿರುವುದರ ಪರಿವೆಯೇ ಇಲ್ಲ. ಅವಳು ತನ್ನ ಯೋಚನೆಯಲ್ಲಿ ಲೀನೆಯಾಗಿ ಹೋಗಿದ್ದಳು. ಒಮ್ಮಿಂದೊಮ್ಮೆ ನಿಟ್ಟುಸಿರು ಬಿಟ್ಟು, ಮೆಲುದನಿಯಲ್ಲಿ ಹಾಡಲು ತೊಡಗಿದಳು.

"ನೀನೇ ಅನಾಥ ಬಂಧು ಕೃಷ್ಣ! ನೀನೇ ಕಾರುಣ್ಯಸಿಂಧು ‖ ಪಲ್ಲ ‖

" ಪತಿಗಳೈವರಿದ್ದರೇನು | ಸತಿಯು ಸಮಯಕ್ಕೊದಗಲಿಲ್ಲ |
"ಗತಿ ನೀನೇ ಮುಕುಂದ ! ಎಂದರೆ! ಅತಿ ಬೇಗದಿ ಬಂದೊದಗಿದೆ ಕೃಷ್ಣ ||"

ವೀಣೆಯನ್ನು ಮೂದಲಿಸುವ ಮಂಜುಲ ಕಂಠದಿಂದ ಶಾಮಲೆಯು ಹಾಡುತ್ತಲಿದ್ದಳು. ಶಶಿಧರನು ಇನ್ನಿಷ್ಟು ಹುಚ್ಚನಂತಾದನು. ಅವನಿಗೀಗ ತಡೆಯುವುದಾಗಲಿಲ್ಲ. ಕೈಯಲ್ಲಿ ಹಿಡಿದ ಮಲ್ಲಿಗೆ ಹೂವಿನ ಚಂಡಿನಿಂದ, ಮಲಗಿದವಳನ್ನು ಗುರಿಯಿಟ್ಟು ಎಸೆದನು. ಶಾಮಲೆಯು ಬೆಚ್ಚಿಬಿದ್ದಳು. ಚಟ್ಟನೆ ಎದ್ದು ಕುಳಿತಳು ಬೆದರುಗಣ್ಣುಗಳಿಂದ ಕಿಡಿಕಿಯತ್ತ ನೋಡಿದಳು. ಮುಗುಳುನಗೆ ನಗುತ್ತನಿಂತ ಶಶಿಧರನ ಮೊಗವನ್ನು ಕಂಡಳು. ಶಾಮಲೆಯ ಮುಖವೂ ವಿಕಸಿತವಾಯಿತು. ನಾಚಿಕೆಯಿಂದ ಕೆಂಪೇರಿತು. ಕಿರುನಗೆ ನಗುತ್ತ "ಯಾವಾಗ ಬಂದೆ? ಶಶಿಧರ! ನಿನ್ನ ದಾರಿಯನ್ನೆ ಕಾಯುತ್ತ ಲಿದ್ದೆನು" ಎಂದು ನುಡಿದಳು ಎದ್ದು ಬಂದು ಬಾಗಿಲು ತೆರೆದಳು. "ನೀನು ಬಂದುದು ನನಗೆ ಗೊತ್ತಾಗಲಿಲ್ಲ ಬಿಡು!" ಎಂದೆನ್ನುತ್ತ ಶಶಿಧರನನ್ನು ಆದರಿಸಿ ಒಳಕ್ಕೆ ಕರೆದೊಯ್ದಳು. ಪುಸ್ತಕ ತೆಗೆದುಕೊಂಡು ಬಂದು ಬಳಿ ಯಲ್ಲಿ ಕುಳಿತಳು. ಶಶಿಧರನು ಪಾಠ ಹೇಳಿಕೊಡಲು ಮೊದಲು ಮಾಡಿದನು. ಅದೇಕೋ! ಇಂದು ಅವನೆದೆ ದಡದಡಿಸುತ್ತಲಿದ್ದಿತು. ಹೇಳುವಾಗ ನಾಲಿಗೆ ಎಡವುತ್ತಲಿದ್ದಿತು. ಹೇಗಾದರೂ ಹೇಳಿ, ಪಾಠದ ಕಾಟವನ್ನು ತೀರಿಸಿದಂತೆ ಮಾಡಿದನು. ಶಶಿಧರನು ಇಂದು ಹೀಗೇಕೆ ಮಾಡುತ್ತಿರುವನೆಂಬುದು ಶಾಮಲೆಗೆ ತಿಳಿಯಲಿಲ್ಲ.

"ಶಾಮಾ! ನಾನು ಬಂದಾಗ ನೀನೇನೋ ಗಹನವಾದ ಯೋಚನೆ ಯಲ್ಲಿ ಮುಳುಗಿ ಹೋಗಿದ್ದಿಯಲ್ಲ! ಅದೇನು ಯೋಚನೆ?" ಕುತೂಹಲದ ನೋಟದಿಂದ ಶಶಿಧರನು ಮಾತನಾಡಿದನು.

"ಇಲ್ಲ! ನನಗೇತರ ಯೋಚನೆ? ಹೊತ್ತು ಹೋಗದಂತಾದುದರಿಂದ ಹಾಗೆಯೇ ಬಿದ್ದುಕೊಂಡಿದ್ದೆ; ಇಷ್ಟೇ ಹೊರತು ಮತ್ತೇನಿಲ್ಲ" ಶಾಮಲೆಯು ಮನದ ಮಾತನ್ನು ಮರೆಮಾಡಿ ಹೇಳಿದಳು.

"ನೀನೇನು ಹೇಳುತ್ತೀಯೆ? ನನಗೇನೂ ತಿಳಿಯುವುದಿಲ್ಲವೆನ್ನುತ್ತೀ ಯೇನು? ನಾನು ೧೫-೨೦ ನಿಮಿಷಗಳ ವರೆಗೂ ನಿನ್ನನ್ನು ನೋಡುತ್ತ ನಿಂತುಕೊಂಡಿದ್ದೆನು. ನಿನಗದರ ಅರಿವು ಕೂಡ ಇರಲಿಲ್ಲ. ಮೈಯ್ಯಲು ಗಿಸದೆ, ಕಣ್ಣು ಕದಲಿಸದೆ, ಶೂನ್ಯದೃಷ್ಟಿಯುವಳಾಗಿ, ಮುಂಗಾಣದವಳಂತೆ

ಮಲಗಿಕೊಂಡಿದ್ದೆ. ಅದೆಷ್ಟೋ ಸಲ ನಿಡುಸುಯ್ಯುತ್ತಲಿದ್ದೆ. ಯೋಚನೆ ಯೇನೂ ಇಲ್ಲದಿದ್ದಲ್ಲಿ 'ನೀನೇ ಅನಾಥ ಬಂಧು' ಎಂಬ ಪದವನ್ನೇಕೆ ಹಾಡುತ್ತಲಿದ್ದೆ? ಅದೇನು ಬೇರೆಯವರಿಗೆ ಹೇಳದಂತಹ ಯೋಚನೆ ಯೇನು?" ಶಶಿಧರನು ತೀರ ಆಪ್ತನಂತೆ ಕಳವಳದ ದನಿಯಿಂದ ಕೇಳಿದನು.

ಶಾಮಲೆಯೇನೂ ಮಾತನಾಡಲಿಲ್ಲ. ಕುತ್ತಿಗೆಯ ನರಗಳು ಬಿಗಿದುವು. ನೀರು ತುಂಬಿದ ಕಣ್ಣುಗಳಿಂದ ಶಶಿಧರನ ಕಡೆಗೆ ನೋಡಲು ತೊಡಗಿದಳು.

"ಏಕೆ ಹೇಳುವಂತಿಲ್ಲವೇನು?" ಶಶಿಧರನು ಮೆಲ್ಲಗೆ ಕೇಳಿದನು.

"ಶಶಿಧರ! ನಮ್ಮ ತಾಯಿ ಮನೆಯ ಮಾತನ್ನು ಯಾರ ಮುಂದೆಯೂ ಹೇಳಕೂಡದೆಂದು, ನನಗೆ ಆಗಾಗ ಹೇಳುತ್ತಿರುವಳು. ಎಂತಲೇ ಯಾರೊಡನೆಯೂ ನಾನು ಹೆಚ್ಚಾಗಿ ಮಾತಾಡುವುದಿಲ್ಲ. ನಾವು ಪಡುತ್ತಿ ರುವ ಕಷ್ಟನಷ್ಟದ ಸಂಗತಿಗಳನ್ನು, ಇದುವರೆಗೆ ಯಾರೆದುರಿಗೂ ನಾನು ಬಾಯಿಬಿಚ್ಚಿ ನುಡಿದಿಲ್ಲ. ಹೆಚ್ಚೇನು? ನಿನ್ನ ಮುಂದೆ ಕೂಡ, ಇದರ ಬಗೆಗೆ ಒಮ್ಮೆಯೂ ಒಂದು ಮಾತನ್ನೂ ಒಡೆನುಡಿದಿಲ್ಲ. ಶಶಿಧರ! ನೀನೀಗ ನನಗೆ ಮಂದಿಯವನಾಗಿ ಕಾಣಲೊಲ್ಲೆ. ಅದೇಕೋ ಮನೆಯವನೆಂದೇ ನನ್ನ ಭಾವನೆಯಾಗಿದೆ. ನಿನ್ನೆದುರಿಗೆ ಈಗ, ನಮ್ಮ ವಿಷಯದ ಯಾವ ಮಾತನ್ನು ಹೇಳಲೂ ಸಂಕೋಚವೆನಿಸದಂತಾಗಿದೆ. ನಮ್ಮ ಮನೆಯ ಸ್ಥಿತಿ ಗತಿಗಳನ್ನೆಲ್ಲ ನಿನಗೆ ಹೇಳಿಬಿಡಬೇಕೆಂದು ಆಗಾಗ ನನ್ನ ಮನಸ್ಸಿಗೆನಿಸು ತ್ತಿದ್ದಿತು; ಮರಳಿ, ತಾಯಿ ಏನೆನ್ನುತ್ತಾಳೋ?– ಎಂದು ಹೆದರಿಕೊಂಡು ಸುಮ್ಮನಿರುತ್ತಿದ್ದೆನು. ಆದರೆ ಈಗ ನಿನ್ನೆದುರಿಗೆ ನನ್ನ ಹೃದಯವನ್ನು ಬಿಚ್ಚಿ ತೋರಿಸುವುದರ ಹೊರತು ನನಗೆ ಬೇರೆ ದಾರಿಯೇ ತೋರದಾಗಿದೆ." ಶಾಮಲೆಯು ಕಂಬನಿ ಕರೆಯುತ್ತಲೇ ಮಾತನಾಡಿದಳು.

"ಶಾಮಾ! ಸ್ವಲ್ಪವೂ ಸಂಕೋಚಗೊಳ್ಳಬೇಡ. ನಾನು ಮನೆಯ ವನಾಗಿಯೇ ಕೇಳುವೆನು, ಒಂದನ್ನೂ ಮರೆಮಾಜದೆ ಹೇಳು." ಶಶಿಧರನು ಎದೆಯು ಉಕ್ಕೇರಿ ಬರುವಂತೆ ನುಡಿದನು.

"ಶಶಿಧರ! ನಮ್ಮ ಮನೆಯ ಸ್ಥಿತಿಯನ್ನು ನೀನು ಸ್ವಲ್ಪಾದರೂ ಕಂಡುಹಿಡಿದಿರಬಹುದಲ್ಲವೇ? ನಮ್ಮ ದಾರಿದ್ರ್ಯದ ಚಿತ್ರವು ನಿನ್ನ ತಿಳಿನೋಟದ ಎದುರಿಗೆ ಬಾರದೆ ಹೋಗಿರಲಿಕ್ಕಿಲ್ಲ."

"ನಾನು ಅದನ್ನೆಲ್ಲ ಸರಿಯಾಗಿ ಅರಿತಿದ್ದೇನೆ."

"ಮನೆಗೆ ಬಾಡಿಗೆಯಾಗಿ ಬಂದ ಹಣದಿಂದಲೆ ನಮ್ಮ ಬಾಳುವೆ ಯೆಂಬುದನ್ನು ನೀನು ಬಲ್ಲೆಯಷ್ಟೇ!"

"ಅಹುದು ಬಲ್ಲೆ."

"ಈಗ ನಾಲ್ಕು ತಿಂಗಳಿಂದ ನಮ್ಮ ಮನೆಯಲ್ಲಿರಲು ಬಾಡಿಗೆಯ ವರು ಬಂದೇ ಇಲ್ಲ. ಸಾಲದುದಕ್ಕೆ ನನ್ನ ಮದುವೆಯ ವಿಚಾರವೊಂದು ಮುಂದೆ ಬಂದು ನಿಂತಿದೆ. ಇದರಿಂದ ನಮ್ಮ ತಾಯಿ ತೀರ ಹಣ್ಣಾಗಿ ದ್ದಾಳೆ. ಹೃದ್ರೋಗ ಹಚ್ಚಿಕೊಂಡಿದ್ದಾಳೆ ಇಂತಹದರಲ್ಲಿ ಜೋಯಿಸ ಗುಂಡಾಭಟ್ಟರು, ನಳರಾಜನನ್ನು ಕಲಿಯು ಕಾಡಿದಂತೆ ನಮ್ಮನ್ನು ಕಾಡು ತ್ತಲಿದ್ದಾರೆ."

"ಅದೇಕೆ? ಅವನಿಗೇನು ಹೊಟ್ಟೆನೋವು?" ಶಶಿಧರನು ಆತುರದಿಂದ ಕೇಳಿದನು.

"ಹೇಳುತ್ತೇನೆ ಕೇಳು! ಶಶಿಧರ! ದೇಸಾಯಿ ವೆಂಕಟರಾಯರಿದ್ದಾ ರಲ್ಲ! ಅವರಿಗೆ ನನ್ನನ್ನು ಕೊಡಿಸಿ ಮದುವೆ ಮಾಡಬೇಕೆಂದು, ಗುಂಡಾ ಭಟ್ಟನ ಪ್ರಯತ್ನ. ಅದಕ್ಕಾಗಿಯೆ ಆಗಾಗ ನಮ್ಮ ಮನೆಗೆ ಬರುತ್ತಿರುವನು. 'ಶಾಮಲೆಯನ್ನು ವೆಂಟಕರಾಯರಿಗೆ ಕೊಟ್ಟರೆ ನಿಮಗೆ ಸಾವಿರ ರೂಪಾಯಿ ಗಳನ್ನು ಕೊಡಿಸುವೆನು' ಎಂದು ನಮ್ಮ ತಾಯಿಗೆ ಹೇಳುತ್ತಿರುವನು."

ಶಶಿಧರನ ಮುಖವು ಹೇಗೆ ಹೇಗೆಯೋ ಆಯಿತು. ತಡೆಯುತ್ತಿರುವ ಮಾತಿನಿಂದ ಅವನು ಶಾಮಲೆಯನ್ನು ಕೇಳಿದನು "ಏನು! ಸೀತಮ್ಮ ಅವನ ಮಾತಿಗೆ ಒಪ್ಪಿಕೊಂಡಿದ್ದಾರೆಯೆ?"

"ಇಲ್ಲ ಶಶಿಧರ! ಅಮ್ಮ ಒಪ್ಪಿಕೊಂಡಿಲ್ಲ, ಒಪ್ಪಿಕೊಳ್ಳುವಂತೆಯೂ ಕಾಣುವುದಿಲ್ಲ. ಎಂತಲೇ ಗುಂಡಾಭಟ್ಟನು ಕಲಿಯಾಗಿ ಕಾಡುತ್ತಿದ್ದಾನೆ. ನಮ್ಮ ವಿಷಯವಾಗಿ ಹೊಲ್ಲದ ದುರ್ವಾರ್ತೆಗಳನ್ನು ಸುಳ್ಳುಸುಳ್ಳೇ ದಿನ ಕ್ಕೊಂದು ಚೆಂದ ಹಬ್ಬಿಸುತ್ತಿದ್ದಾನೆ. ಮನೆಯಲ್ಲಿ ಸತ್ತ ಇಲಿಯನ್ನು ಚೆಲ್ಲಿ, ಇದ್ದ ಜನರನ್ನು ಬಿಡಿಸಿ ಕಳುಹಿಸಿದನು. ನಮ್ಮ ಮನೆಯಲ್ಲಿ ಭೂತ ವಿದೆಯೆಂದು ಹುಯಿಲೆಬ್ಬಿಸಿ, ಹೊಸ ಬಾಡಿಗೆಯವರಾರೂ ಬಾರದಂತೆ ಮಾಡಿರುವನು. ನಮ್ಮನ್ನು ಹಣ್ಣುಹಣ್ಣು ಮಾಡಿ, ತನ್ನ ಕಾರ್ಯ ಸಾಧಿಸಿ ಕೊಳ್ಳಬೇಕೆಂದು ಯೋಚಿಸಿರುವನಾಗಿ ಕಾಣುವುದು. ಏನು ಮಾಡಬೇಕು ಶಶಿಧರ! ಬಲವಿಲ್ಲದ ಕಾಲಕ್ಕೆ ನೆಲವೆದ್ದು ಬಡಿಯಿತೆಂಬಂತೆ ನಮ್ಮ ಸ್ಥಿತಿ

ಯಾಗಿದೆ...." ಶಾಮಲೆಯು ಕಂಠ ಬಿಗಿದುಬಂದಿತು. ಕಣ್ಣಲ್ಲಿ ನೀರು ತುಳುಕಿದುವು. ಆಗಿನ ಅವಳ ದೈನ್ಯಸ್ಥಿತಿಯ ಚಿತ್ರವು ಶಶಿಧರನಿಗೆ ಅಸಹನೀಯವಾಯಿತು. ಅವನ ಕಣ್ಣಿನಿಂದಲೂ ಒಂದೆರಡು ಹನಿ ಕಂಬನಿಗಳುದುರಿದುವು.

ಶಾಮಲೆಯು ಅಳುವನ್ನು ತಡೆದು, ಮತ್ತೆ ಮಾತನಾಡಲು ತೊಡಗಿದಳು. "ಶಶಿಧರ! ಸದ್ಯಕ್ಕೆ ನಮ್ಮ ಜೀವನದ ಮಾರ್ಗವೇ ಕಟ್ಟಾಗಿ ಕುಳಿತಿದೆ. ಅದರಲ್ಲಿ ನನ್ನ ಮದುವೆಯ ಮಾತಂತೂ ಎದೆಗೆ ಮುಳ್ಳಿನಂತೆ ಚುಚ್ಚುತ್ತಲಿದೆ!"

'ಶಾಮಾ! ಇಂತಹ ಪ್ರಸಂಗವು ಯಾರಿಗೂ ಬರಬಾರದು ನೋಡು! ಇರಲಿ! ಇದಕ್ಕಾಗಿ ನಾನು ಯಾವ ರೀತಿಯಿಂದ ನಿಮಗೆ ನೆರವಾಗಲಿ?" ಶಶಿಧರನು ಉತ್ಕಂಠಿತನಾಗಿ ನುಡಿದನು.

"ಬೇರೆ ನೆರವೇನೂ ಬೇಕಾಗಿಲ್ಲ. ಆ ಗುಂಡಾಭಟ್ಟನ ಕಾಟದಿಂದ, ನನ್ನ ತಾಯಿ ಉಳಿದರೆ ಸಾಕಾಗಿದೆ. ನಿನ್ನೆ ರಾತ್ರಿ ನಾನು ಬೇಕಾದಷ್ಟು ಹೇಳಿದೆನು. ನನ್ನ ತಾಯಿ ಸಮ್ಮತಿಸಲೇ ಇಲ್ಲ. ಶಶಿಧರ! ನಿನಗೆ ಕೈ ಮುಗಿದು ಬೇಡಿಕೊಳ್ಳುತ್ತೇನೆ. ಹೇಗಾದರೂ ಮಾಡಿ, ವೆಂಕಟರಾಯರಿಗೆ ನನ್ನನ್ನು ಮದುವೆಮಾಡಿಕೊಡುವಂತೆ ಅಮ್ಮನ ಮನವನ್ನೊಲಿಸು! ಅವಳ ಸಂಕಟವನ್ನು ನೋಡಿ, ನನ್ನಿಂದ ಸಹಿಸುವುದಾಗದಪ್ಪಾ ಆಗದು...." ಶಾಮಲೆಯು ಕರುಣಾವ್ಯಂಜಕ ಧ್ವನಿಯಲ್ಲಿ ನುಡಿದಳು.

ಶಶಿಧರನು ಕೇಳಿದನು. ಕಣ್ಣು ಕೆರಳಿದುವು. ಮುಖವೆಲ್ಲ ಕೆಂಪಾಯಿತು. "ಶಾಮಾ! ನಿನ್ನನೆಂದೂ ಆ ಮುದಿಗೂಗೆಯಿಂದ ಮುಟ್ಟಗೊಡಲಾರೆ. ದುಃಖಾತಿರೇಕದಿಂದ ಬುದ್ಧಿಯಿಲ್ಲದವಳಾಗಿ ಎಂತಹ ಅಭದ್ರ ಮಾತುಗಳನ್ನಾಡುತ್ತಿದ್ದೀಯೆ? ನಿನ್ನ ಕುಸುಮ ಕೋಮಲವಾದ ಕರವನ್ನು, ಆ ಕೋಡಗನ ಕೈಯಿಂದ ಎಂದೆಂದಿಗೂ ಹಿಡಿಯಗೊಡಲಾರೆನು........" ಶಶಿಧರನು ಆವೇಶದ ಭರದಿಂದ ಇನ್ನೂ ಮುಂದೆ ಮಾತನಾಡುತ್ತಿದ್ದನು. ಹಠಾತ್ತಾಗಿ ಸೀತಮ್ಮ ಅವರು ಕುಳಿತಲ್ಲಿಗೆ ಬಂದರು.

"ಶಶಿಧರ, ಹಾಗಾದರೆ ಶಾಮಲೆಯ ಕೈಯನ್ನು ಇನ್ನಾರ ಕೈಯೊಳಗೆ ಕೊಡಬೇಕೆನ್ನುತ್ತೀಯೆ? ಏನು ನೀನೇ ಹಿಡಿಯಬೇಕೆನ್ನುವೆಯೇನು?" ವಿಷಾದದ ಕಿರುನಗೆ ನಗುತ್ತ ಸೀತಮ್ಮ ನುಡಿದರು. ಶಾಮಲೆಯು ಬೆಚ್ಚಿಬಿದ್ದಳು. ಸೀತಮ್ಮ ಹೊರಗೆ ನಿಂತುಕೊಂಡು ಇವರಾಡುವ

ಮಾತನ್ನೆಲ್ಲ ಕೇಳಿದ್ದರೇನೊ!

ಶಶಿಧರನು ಮೊದಲಿನ ಆವೇಶದಲ್ಲಿಯೇ ಮಾತನಾಡಿದನು. "ಸಾನೇ ಹಿಡಿಯಬಹುದು. ಆದಕ್ಕೆ ತಡೆಯೇನು ? ಸೀತಮ್ಮ! ಶಾಮಲೆಯ ಕೈಯನ್ನು ನಾನು ಹಿಡಿದರೆ ನಿಮಗೆ ಒಪ್ಪಿಗೆಯೇ ?"

ಸೀತಮ್ಮನ ಮೋರೆಯರಳಿತು; ಕಣ್ಣೀರು ತುಳುಕಿತು; ಹೃದಯವು ಉಕ್ಕೇರಿತು. "ನನ್ನಂತಹ ಹತಭಾಗಿನಿಯ ಮಗಳಿಗೆ, ನಿನ್ನಂತಹ ಭಾಗ್ಯಶಾಲಿಯ ಕೈ ಹಿಡಿಯುವ ಪುಣ್ಯವೆಲ್ಲಿಯದಪ್ಪಾ!" ಶಶಿಧರನ ಮೋರೆಯನ್ನು ಆಶಾಪೂರಿತ ದೃಷ್ಟಿಗಳಿಂದ ನೋಡುತ್ತ, ದೈನ್ಯಭಾವದಿಂದ ಸೀತಮ್ಮ ನುಡಿದರು.

"ಸೀತಮ್ಮ! ಬಹುದಿನಗಳಿಂದಲೂ ಬಚ್ಚಿಟ್ಟುಕೊಂಡಿರುವ ನನ್ನ ಬಗೆಯ ಮಾತನ್ನು ಈಗ ನೀವೇ ಬಿಚ್ಚಿ ಆಡಿಸುತ್ತಿದ್ದೀರಿ ಶಾಮಲೆಯ ರೂಪ-ಗುಣ-ಶೀಲಗಳು, ನಿಜವಾಗಿಯೂ ನನ್ನ ಮನದಲ್ಲಿ ಮನೆ ಮಾಡಿಕೊಂಡುಬಿಟ್ಟಿರುವುವು. ಆಗುವುದಾದರೆ ಶಾಮಲೆಯನ್ನೇ ಮದುವೆಯಾಗಬೇಕೆಂದು ನಾನೆಂದೋ ಮನದಲ್ಲಿ ನಿಶ್ಚಯಮಾಡಿರುತ್ತೇನೆ. ಅಂದಿನ ವಿಚಾರದಲ್ಲಿಯ ನಿಶ್ಚಯವನ್ನೇ ಇನ್ನಿಷ್ಟು ಗಟ್ಟಿಮಾಡಿ, ಇಂದು ಪ್ರತಿಜ್ಞೆಯಂತೆ ನಿಮ್ಮೆದುರಿಗೆ ಉಚ್ಚಾರ ಮಾಡಿರುತ್ತೇನೆ." ಶಶಿಧರನು ನಿರಾತಂಕವಾಗಿ ಬಡಬಡ ನುಡಿದುಬಿಟ್ಟನು.

ಶಾಮಲೆಯು ಲಜ್ಜೆಯಿಂದ ಕೆಂಪೇರಿದ ತನ್ನ ಮೋರೆಯನ್ನು ಕೆಳಕ್ಕೆ ತಗ್ಗಿಸಿ ಕುಳಿತು, ಓರೆನೋಟದಿಂದ ತನ್ನ ತಾಯಿಯನ್ನೊಮ್ಮೆ ಶಶಿಧರನನ್ನೊಮ್ಮೆ ನೋಡುತ್ತಲಿದ್ದಳು. ಮುಚ್ಚಿಕೊಳ್ಳಬೇಕೆಂದರೂ ಮೀರಿಬರುತ್ತಲಿರುವ ಮುಗುಳುನಗೆಯ ಮೊಗದಿಂದ, ಕೈಬೆರಳಿನಿಂದ ನೆಲವನ್ನು ಗೀರುತ್ತಲಿದ್ದಳು.

ಸೀತಮ್ಮ ಶಾಮಲೆಯ ಬಳಿಗೆ ಬಂದರು. ಮಮತೆಯಿಂದ ಮೈದಡವಿ ಮಾತನಾಡಿದರು. "ಮಗೂ, ಮೇಲಕ್ಕೆ ಮುಖ ಮಾಡಮ್ಮಾ! ಇದುವರೆಗೆ ಸರಿಯಾಗಿ ತಿಳಿಯದಿದ್ದ ನಿನ್ನ ಹಣೆಯ ಬರೆಹವನ್ನು ಇನ್ನೊಮ್ಮೆ ಚೆನ್ನಾಗಿ ಓದಿನೋಡುತ್ತೇನೆ. ಶಶಿಧರ! ನಿಜವಾಗಿಯೂ ನೀನು ನನ್ನ ಪಾಲಿಗೆ ದೇವರು. ನಿನ್ನ ಹೊಟ್ಟೆಯಿಂದ ನಾನು ಸಾವಿರ ಸಲ ಹುಟ್ಟಿಬಂದು ನಿನ್ನ ಸೇವೆ ಮಾಡಿದರೂ, ನೀನೀಗ ನನಗೆ ಮಾಡಬೇಕೆನ್ನುತಿರುವ

ಉಪಕಾರವು–ತೀರದಷ್ಟು ಭಾರವಾದುದು. ಪರಮಾತ್ಮಾ! ನೀನು ನಿಜವಾಗಿಯೂ ಅನಾಥಬಂಧುವು; ದಯಾಪೂರ್ಣನು." ಸೀತಮ್ಮ ಅನಿರ್ವಚನೀಯವಾದ ಭಕ್ತಿಭಾವದಿಂದ ಕೈಮುಗಿದು ಮಾತನಾಡಿದರು. ಬಳಿಕ ಮೂವರೂ ಕೂಡಿ ಅದೆಷ್ಟೋ ಮಾತನಾಡುತ್ತ ನಗುತ್ತ ಕುಳಿತಿದ್ದರು. ಅಂದಿನ ಸೀತಮ್ಮನ ಮೋರೆಯು ಹದಿನಾಲ್ಕು ವರ್ಷದ ಹಿಂದಿನದಾಗಿತ್ತು. ಶಾಮಲೆಯ ಕಣ್ಣು ಎಡೆಬಿಡದೆ ನಗುತ್ತಲಿದ್ದುವು.

೫

ಹತ್ತುಗಂಟೆ ರಾತ್ರಿಯ ಸಮಯ. ಕೃಷ್ಣನಾಯಕರು ಉಪ್ಪರಿಗೆಯ ಕಿರುಮನೆಯಲ್ಲಿ ಆರಾಮುಕುರ್ಚಿಯೊಂದರ ಮೇಲೆ, ಕಾಲುಚಾಚಿ ಬಿದ್ದುಕೊಂಡಿದ್ದರು. ಹುಬ್ಬನ್ನು ಆಕುಂಚಿತವಾಗಿ ಮಾಡಿ, ಅದೇನನೋ ಯೋಚಿಸುತ್ತಲಿದ್ದರು. ಯಾವುದೊ ಬಗೆಹರಿಯದ ತೊಡಕಿನಲ್ಲಿ ಸಿಲುಕಿದಂತೆ, ಮುಖದ ಲಕ್ಷಣವು ಒಡೆದುಕಾಣುತ್ತಲಿದ್ದಿತು. ನಸುವೇಳೆಯಲ್ಲಿಯೆ, ಶಶಿಧರನು ಮೆಲ್ಲ ಮೆಲ್ಲಗೆ ಹೆಜ್ಜೆಗಳನ್ನು ಹಾಕುತ್ತ ಅಲ್ಲಿಗೆ ಬಂದನು. "ಮತ್ತೆ ನನ್ನನ್ನು ಕರೆಯಿಸಿದುದೇಕೆ?" ಎಂದು ಬೆದರುನುಡಿಯಿಂದ ಕೇಳಿದನು.

"ಏನು! ಇನ್ನೊಮ್ಮೆ ಹೇಳು! ಒಳ್ಳೆಯತನದಿಂದ ನನ್ನ ಮಾತು ಕೇಳಿ, ಮದುವೆಗೆ ಒಪ್ಪಿಕೊಳ್ಳುತ್ತೀಯೋ ಇಲ್ಲವೋ?" ನಾಯಕರು ಗಂಭೀರಸ್ವರದಿಂದ ನುಡಿದರು.

"ಮದುವೆಗೆ ನನ್ನ ಅಸಮ್ಮತಿಯೆಲ್ಲಿದೆ?" ಶಶಿಧರನು ವಿನಯದಿಂದ ಮಾತನಾಡಿದನು.

"ಎಂದರೆ! ಮದುವೆಗೆ ಅಸಮ್ಮತಿಯಿಲ್ಲ; ನಾವು ತಂದ ಕನ್ಯೆಯನ್ನು ಮದುವೆಯಾಗುವುದಿಲ್ಲ. ಇದೇನು ಹುಡುಗಾಟ ನಡೆಯಿಸಿದ್ದೀಯೆ? ನೀನು ಸಾವಿರ ಮಾತನ್ನು ಹೇಳಿದರೂ, ಆ ದರಿದ್ರ–ವಿಧವೆಯ ಮಗಳನ್ನು ತಂದುಕೊಂಡು, ನನ್ನ ಮನೆತನದ ಘನತೆಗೆ ಹೊಲಸು ಬಳೆಯಲಾರೆನು." ನಾಯಕರು ನಿಶ್ಚಯದ ಸ್ವರದಿಂದ ನುಡಿದರು.

"ದರಿದ್ರರು ದೈವವಶದಿಂದ ಶ್ರೀಮಂತರೇಕೆ ಆಗಬಾರದು? ಅಲ್ಲದೆ

ತಾಯಿ ವಿಧವೆಯಾದುದಕ್ಕೆ, ಪಾಪ! ಆ ಮಗಳ ಅಪರಾಧವೇನು?" ಶಶಿಧರನು ಮೆಲ್ಲಗೆ ಹೇಳಿದನು.

"ಇನ್ನು ನಿನ್ನ ವಿನಯದ ಸೋಗನ್ನು ಸಾಕುಮಾಡು. ನಾನು ಹೇಳುವುದನ್ನು ಮುನ್ನೋಡಿ ಕೇಳು. ದೊಡ್ಡ ಮನೆತನದ ಹೆಂಣು ಬಂದಿದೆ. ನಾನು ತೆಗೆದುಕೊಳ್ಳುವೆನೆಂದು ಮಾತು ಕೂಡ ಕೊಟ್ಟಿದ್ದೇನೆ. ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡಲು ಸಮ್ಮತಿಸಿದ್ದಾರೆ. ಸಣ್ಣವನಲ್ಲ ನೀನು. ವಿಚಾರ ಮಾಡಿ ನೋಡು" ನಾಯಕರು ನಸು ಸಮಾಧಾನದಿಂದ ಮಾತನಾಡಿದರು.

"ಮದುವೆ ಮಾಡಿಕೊಳ್ಳುವುದು ವರದಕ್ಷಿಣೆಗಾಗಿ ಅಲ್ಲ!" ಶಶಿಧರನು ಒಂದೇ ಮಾತನಾಡಿ ಸುಮ್ಮನಾದನು.

ನಾಯಕರು ರೇಗಿದರು. "ಕತ್ತೆ! ನನಗೆ ಬುದ್ಧಿಯನ್ನು ಕಲಿಸಲಿಕ್ಕೆ ಬರುತ್ತೀಯೇನು? ನಾನಿನ್ನು ನಿನ್ನ ಸಮ್ಮತಿಯನ್ನೇ ಕೇಳುವದಿಲ್ಲ ನಡೆ! ಅದೇ ಹೆಣ್ಣನ್ನೇ ತಂದು ನಿನಗೆ ಮದುವೆ ಮಾಡುತ್ತೇನೆ. ಆಮೇಲೆ ನೀನೇನು ಮಾಡುವೆಯೆಂಬುದನ್ನು ನೋಡುತ್ತೇನೆ."

"ಮದುವೆ ಮಾಡಿಕೊಂಡು ಹೆಂಡತಿಯನ್ನಾಳುವವನು ನಾನು." ಶಶಿಧರನು ಮತ್ತೆ ಸಮಾಧಾನದಿಂದಲೇ ನುಡಿದನು.

ನಾಯಕರು ಹೆಡೆತುಳಿದ ಹಾವಿನಂತೆ ಒಮ್ಮೆಲೇ ಮೇಲಕ್ಕೆದ್ದು ನೇರವಾಗಿ ಕುಳಿತುಕೊಂಡರು. "ಮೂರ್ಖ! ನಡೆ! ನನ್ನ ಪಾಲಿಗೆ ನೀನು ಸತ್ತೆಯೆಂದು ಇಂದೇ ನೀರು ಬಿಡುತ್ತೇನೆ. ಹೇಳಿದ ಮಾತನ್ನು ಕೇಳದ ಮಗನು, ಇದ್ದರೇನು, ಸತ್ತರೇನು! ನನಗೆ ಎದುರಾಡುತ್ತೀಯಾ? ನಡೆ! ನಾನಿನ್ನು ನಿನ್ನ ಕೆಟ್ಟ ಮೋರೆಯನ್ನು ನೋಡಲಾರೆ. ಮಕ್ಕಳು ಬೇಕು ಬೇಕು! ಏತಕ್ಕೆ ಬೇಕು! ಹಡೆದವರ ಜೀವ ತಿನ್ನಲಿಕ್ಕೆ!" ನಾಯಕರು ಸಂತಾಪದಿಂದ ಸಿಡಿಯುತ್ತ ನುಡಿದರು.

ಶಶಿಧರನು ಏನೂ ಮರುಮಾತು ಕೊಡದೆ, ಅಲ್ಲಿಂದ ಹೊರಟು ಹೋಗಲು ಮುಖ ತಿರುವಿದನು. ಒಂದೆರಡು ಅಡಿ ಮುಂದೆ ನಡೆದನು.

"ಏ! ತಿಳಿಗೇಡಿ! ತಡೆ! ಎಲ್ಲಿ ಹೋಗುತ್ತಿ?" ನಾಯಕರು ಮತ್ತೆ ಸಿಟ್ಟಿನ ಭರದಲ್ಲಿಯೇ ನುಡಿದರು. ಶಶಿಧರನು ಅಲ್ಲಿಯೇ ಹೊರಳಿನಿಂತನು.

"ಇದು ನೋಡು! ನಿನಗೆ ಕೊನೆಯ ಮಾತನ್ನು ಹೇಳುತ್ತೇನೆ.

ನಿನಗೆ ಶಾಮಲೆಯನ್ನು ಮದುವೆ ಮಾಡಿಕೊಳ್ಳುವುದಿದ್ದರೆ ಮಾಡಿಕೊ! ನನ್ನದೇನೂ ತಡೆಯಿಲ್ಲ. ಆದರೆ ಆ ವಿಧವೆ ವರದಕ್ಷಿಣೆಯನ್ನೆಷ್ಟು ಕೊಡುತ್ತಾಳೆ?" ನಾಯಕರು ಸ್ವಲ್ಪ ಶಾಂತರಾಗಿ ಕೇಳಿದರು.

"ಪಾಪ! ತಿನ್ನಲಿಕ್ಕೆ ಹೊಟ್ಟೆತುಂಬ ಅನ್ನ ದೊರೆಯದವರು ವರದಕ್ಷಿಣೆಯನ್ನೇನು ಕೊಡುತ್ತಾರೆ!" ಶಶಿಧರನು ಕನಿಕರದ ದನಿಯಿಂದ ಕೇಳಿದನು.

"ಆಹ್ಹಾ! ನಾನೆಲ್ಲ ಬಲ್ಲೆ. ಆ ವಿಧವೆಯ ಬಳಿಯಲ್ಲಿ ಹಣವಿರುವುದಂತೆ. ಹುಗಿದಿಟ್ಟು ಮೇಲೆ ಬಡತನದ ಸೋಗು ಹಾಕಿದ್ದಾಳೆ. ಅವಳ ಹೊಯ್ಮಾಲಿತನವನ್ನೆಲ್ಲ ಗುಂಡಾಭಟ್ಟರು ನನಗೆ ಕಥೆಮಾಡಿ ಹೇಳಿದ್ದಾರೆ. ಆ ಮಾಯಾವಿನಿಯು ನಿನಗೂ ಮಂಕುಬೂದಿ ಬಳೆದು, ಮರುಳು ಮಾಡಿದ್ದಾಳೆ. ಇರಲಿ! ಈಗ ಉಳಿದುದನ್ನೆಲ್ಲ ತೆಗೆದುಕೊಂಡು ಮಾಡುವುದೇನಿದೆ? ಮಂದಿ ಎರಡು ಸಾವಿರ ಕೊಡಲಿ! ನಾಲ್ಕು ಸಾವಿರ ಕೊಡಲಿ! ನಾನೇನೂ ನೋಡುವುದಿಲ್ಲ. ಕೇವಲ ನಿನ್ನ ಮನಸ್ಸು ಮುರಿಯಬಾರದೆಂತಲೂ, ಅವಳು ಹೆಂಗುಸಿರುವುದರಿಂದಲೂ, ನಾನೇನು ಹೆಚ್ಚಿಗೆ ವರದಕ್ಷಿಣೆ ಬೇಡುವುದಿಲ್ಲ. ಹದಿನೈದುನೂರು ರೂಪಾಯಿಗಳನ್ನು ಮಾತ್ರ ಆಕೆ ಕೊಡಲೇಬೇಕು. ಏನು? ಅವಳು ಕೊಡಲಿಕ್ಕೆ ಸಿದ್ಧಳಿದ್ದಾಳೆಯೆ? ಹಾಗಾದರೆ ನನ್ನದೇನೂ ತಡೆಯಿಲ್ಲ. ಶಾಮಲೆಯನ್ನೇ ತಂದು ಮದುವೆ ಮಾಡುತ್ತೇನೆ." ನಾಯಕರು ಸೋತವರಾಗಿ ಮಾತನಾಡಿದರು.

"ನಾನು ಅವರ ಸ್ಥಿತಿಯನ್ನೆಲ್ಲ ಸರಿಯಾಗಿ ಬಲ್ಲೆ. ವರದಕ್ಷಿಣೆಯ ಮಾತನ್ನೇ ಮರೆತುಬಿಡಬೇಕು."

"ಹಾಗಾದರೆ ಶಾಮಲೆಯ ಮಾತನ್ನು ನೀನೂ ಮರೆಯಬೇಕು."

"ಇದರಿಂದ ನೀವು ನನ್ನನ್ನು ಕೊನೆಯತನಕ ಮರೆಯಬೇಕಾಗುವುದು."

"ಮೂರ್ಖಾ, ಮತ್ತೆ ನನ್ನ ತಲೆಗೆ ಪಿತ್ತವೇರಿಸುತ್ತೀಯಾ? ನನಗೆ ಅಂಜಿಕೆ ತೋರಿಸುತ್ತೀಯಾ? ಎಲ್ಲಿಗೆ ಹೋಗುತ್ತೀ? ಹಾಳಾಗಿ ಹೋಗು! ನಡೆ! ನನ್ನೆದುರಿನಲ್ಲಿ ನಿಲ್ಲಬೇಡ. ಆದರೆ ಇದೊಂದು ಮಾತನ್ನು ಚೆನ್ನಾಗಿ ಜ್ಞಾಪಕದಲ್ಲಿಡು! ಇನ್ನೆಂದಾದರೂ ನೀನು ಆ ಮುಂಡೆಯ ಮನೆಗೆ ಹೋಗಿ ಕುಳಿತ ಸುದ್ದಿ ತಿಳಿದರೆ, ಏನು ಮಾಡುವೆನೆಂಬುದನ್ನು ತಿಳಿದು ನೋಡು!

ಈ ಕ್ಷಣದಿಂದ ಮೊದಲು ಮಾಡಿ, ಆಕೆಯ ಮನೆಯ ಕಡೆಗೆ ಹೊರಳಿ ಸಹ ನೋಡಕೂಡದು! ನಡೆ, ಹೋಗು! ಇನ್ನು ಶಾಮಲೆಯೊಡನೆ ನಿನ್ನ ಮದುವೆಯಾಗುವದು ಕನಸಿನಲ್ಲಿಯೇ!" ಎಂದು ನಾಯಕರು ಕೆರಳಿ ಕಿಡಿಕಿಡಿಯಾಗಿ ನುಡಿದು, ಮತ್ತೆ ಕುರ್ಚಿಯ ಮೇಲೆ ಬಿದ್ದುಕೊಂಡರು. ಶಶಿಧರನು ಅಲ್ಲಿ ಬಹಳ ವೇಳೆ ನಿಲ್ಲಲಿಲ್ಲ. ಕೂಡಲೆ ತನ್ನ ಓದುವ ಕೋಣೆಗೆ ಹೊರಟು ಹೋಗಿಬಿಟ್ಟನು.

೬

ಶಾಮಲೆಯು ಶಾಲೆಯಿಂದ ಐದುವರೆ ಗಂಟೆಗೆ ಮನೆಗೆ ಬಂದಳು. ಪುಸ್ತಕಗಳನ್ನು ನೆಲೆವಾಡ (ಕಪಾಟು) ದಲ್ಲಿಟ್ಟು ಬೇಗಬೇಗನೆ ತಾಯಿಯ ಬಳಿಗೆ ಹೋದಳು. ಈಗ ನಾಲ್ಕಾರು ದಿನಗಳಿಂದ ಅರಳಿ ನಗುತ್ತಿರುವ ಸೀತಮ್ಮನ ಮೋರೆಯಿಂದು, ಬಾಡಿ ಬತ್ತಿಯಾಗಿ ಹೋಗಿದ್ದಿತು. ಕಣ್ಣು ಕೆಂಪಾಗಿದ್ದುವು. ಕಂಬನಿಗಳು ಗಲ್ಲದ ಮೇಲೆ ಧಾರೆಗಟ್ಟಿ ಸುರಿಯುತ್ತಲಿದ್ದುವು. ಲೀಲಾವತಿಯಾದ ಶಾಮಲೆಯು, ತಾಯಿಯೊಡನೆ ಅದೇನು ವಿನೋದ ಮಾಡಬೇಕೆಂದು ಬಂದಿದ್ದಳೋ! ಮುಖದ ಮೇಲೆ ಮುಗುಳು ನಗೆ ಮೂಡಿದ್ದಿತು. ಸೀತಮ್ಮನನ್ನು ಕಂಡೊಡನೆಯೆ ಶಾಮಲೆಯ ನಗೆಯು ಮಾಯಪಾಯಿತು ಬೆದರಿ ನುಡಿದಳು. ತನ್ನ ದೊಡ್ಡ ದೊಡ್ಡವಾದ ಕಣ್ಣುಗಳಲ್ಲಿ ದೈನ್ಯವನ್ನು ತುಂಬಿಕೊಂಡು, ಆತುರದಿಂದ "ಅಮ್ಮಾ, ಮತ್ತೇಕೆ ಅಳುವುದಮ್ಮಾ?" ಎಂದು ಕೇಳಿದಳು.

ಸೀತಮ್ಮ ಅಳುತಳುತಲೇ ಮಾತನಾಡಿದರು. "ಶಾಮಾ! ನಮ್ಮ ಆಳುವ ಅವಧಿಯು ಇನ್ನೂ ಮುಗಿದಂತೆ ತೋರುವದಿಲ್ಲ. ಮುಳುಗಿ ಸಾಯುತ್ತಿರುವವನಿಗೆ ಹುಲ್ಲುಕಡ್ಡಿಯ ಆಧಾರವು ಕೈಗೆ ದೊರೆತಂತೆ, ವಿಧಿಯು ನಮಗೆ ಏತೇತರದೋ ಆಶೆಯ ಆಧಾರವನ್ನು ಒದಗಿಸಿಕೊಟ್ಟನು; ನಮಗೆ ಆನಂದದ ಆಮಿಷವನ್ನು ತೋರಿಸಿದನು; ಸುಖದ ಶಿಖರದ ಮೇಲೆ ಕೂಡಿಸುವೆನೆಂದು ಹೇಳಿ, ಕೈಹಿಡಿದು ಮೇಲೆ ಕರೆದುಕೊಂಡು ಹೋಗಿ, ಆಳವಾದ ಕೊಳ್ಳದಲ್ಲಿ ನೂಕಿದನು........"

ಶಾಮಲೆಯು ದಡದಡಿಸುವ ಎದೆಯಿಂದ ಕೇಳಿದಳು. "ಅಮ್ಮಾ! ಏನಾಯಿತೇ ಈಗ?"

"ಮತ್ತೇನಾಗಬೇಕಮ್ಮಾ! ಆ ಹೊಲೆಯ ಗುಂಡಾಭಟ್ಟನು ಇಲ್ಲದುದೊಂದನ್ನು ಹೇಳಿ, ಮದುವೆಗೆ ಕಲ್ಲು ಹಾಕಿಬಿಟ್ಟಿದ್ದಾನೆ. ಹದಿನೈದುನೂರು ರೂಪಾಯಿಗಳನ್ನಾದರೂ ವರದಕ್ಷಿಣೆಯಾಗಿ ಸಲ್ಲಿಸದಿದ್ದರೆ, ಈ ಮದುವೆಯ ಮಾತನ್ನೇ ನನ್ನೆದುರಿಗೆ ಎತ್ತಬೇಡವೆಂದು ನಾಯಕರು ಶಶಿಧರನಿಗೆ ಖಂಡಿತವಾಗಿ ಹೇಳಿದರಂತೆ. ಅಲ್ಲದೆ ನಮ್ಮ ಮನೆಗೆ ಕಾಲಿಕ್ಕಕೂಡದೆಂದು ಆತನನ್ನು ನಿರ್ಬಂಧಪಡಿಸಿರುವರಂತೆ."

ಶಾಮಲೆಯು ಮುಂಗಾಣದವಳಾದಳು. ಬಿಸುಸುಯ್ದಳು ನಿಲ್ಲುವುದಾಗದೆ ನಿಂತಲ್ಲಿಯೇ ಕುಸಿದುಬಿದ್ದಳು. "ಅಮ್ಮಾ! ಹದಿನೈದು ನೂರು ಹರಳುಗಳಾದರೂ ನಮಗೆ ಸಿಕ್ಕಬಹುದೇ? ದುರ್ದೈವದ ಮುಂದೆ ಓಡುವವರಾರು? ಇದೆಲ್ಲ ನಿನಗೆ ಹೇಗೆ ತಿಳಿಯಿತಮ್ಮಾ?!" ನಡುಗುವ ದನಿಯಿಂದ ಶಾಮಲೆಯು ಕೇಳಿದಳು.

"ಮೂರು ಗಂಟೆಯ ಸುಮಾರಿಗೆ ಆ ನರರಾಕ್ಷಸ ಗುಂಡಾಭಟ್ಟನು ಮತ್ತೆ ಮನೆಗೆ ಬಂದಿದ್ದನು. ಅವನೇ ಇದನ್ನೆಲ್ಲ ಹೇಳಿದನು. 'ಸುಮ್ಮನೆ ನನ್ನ ಮಾತು ಕೇಳಿ, ಶಾಮಲೆಯನ್ನು ವೆಂಕಟರಾಯರಿಗೆ ಕೊಟ್ಟುಬಿಡಿರಿ, ಇದರಿಂದ ನಿಮ್ಮಿಬ್ಬರಿಗೂ ಸೌಖ್ಯವಾಗುವುದು.' ಎಂದು ಮತ್ತೆ ನನಗೆ ಉಪದೇಶಿಸಿದನು" ಸೀತಮ್ಮ ಗುಂಡಾಭಟ್ಟನನ್ನು ಶಪಿಸುತ್ತ ಹೇಳಿದರು.

ಶಾಮಲೆಯು ಮರಳಿ ಕೇಳಿದಳು. "ಅವನಿಗೆ ನೀನೇನು ಹೇಳಿದೆಯಮ್ಮಾ?"

"ಆ ಹೊಲೆಯನಿಗೆ ಕೈಮುಗಿದು, ಕಾಲುಬಿದ್ದು, ಅಂಗಲಾಚಿ ಬೇಡಿಕೊಂಡೆ. 'ಇದೊಂದು ಮಾತನ್ನು ಬಿಟ್ಟು ಇನ್ನೇನಾದರೂ ಹೇಳಿದರೆ, ನಿಮ್ಮ ಮಾತುಗಳನ್ನು ಮೀರಿ ನಡೆಯಲಾರೆ' ಎಂದು ಅದೆಷ್ಟೋ ದೀನೆಯಾಗಿ ಹೇಳಿಕೊಂಡೆ. ಆದರೂ ಆ ಕರಿಯ ಕಲ್ಲ ಮೂರ್ತಿಯ ಹೃದಯಕ್ಕೆ ನೀರೊಡೆಯಲಿಲ್ಲ." ಸೀತಮ್ಮ ಅಳುತ್ತಲೇ ಹೇಳಿದರು.

ಶಾಮಲೆಯೇನೂ ಮಾತನಾಡಲಿಲ್ಲ. ಎಲ್ಲಿಯೋ ನೋಡುತ್ತ ಏನನೋ ಯೋಚಿಸುತ್ತಿರುವವಳಂತೆ ಕುಳಿತಳು. ಸೀತಮ್ಮ ಮುಂದೆ ಹೇಳಲು ತೊಡಗಿದರು.

"ಶಾಮಾ! ತನ್ನ ಮಾತನ್ನು ಸಾಧಿಸುವ ವರೆಗೂ ಆ ಕಪಿಯು ನಮ್ಮನ್ನು ಕೈಯ್ಯಲ್ಲಾದ ಮಟ್ಟಿಗೆ ಕಾಡುವವನೇ! ಈಗ ನೋಡು.

ಹೋಗುವಾಗ ಆತನು ‘ ನನ್ನ ಮಾತು ಕೇಳದಿದ್ದರೆ ನಿಮ್ಮ ಫಲಭೋಗವನ್ನೆ ನೀವು ಉಣ್ಣುವಿರಿ ! ಈಗ ಶಾಮಲೆಗೂ ಶಶಿಧರನಿಗೂ ಸಂಬಂಧವಿದೆಯೆಂದು ಎಲ್ಲ ಕಡೆಗೂ ವಾರ್ತೆ ಹಬ್ಬಿದೆ. ಇನ್ನು ನಿಮ್ಮ ಮಗಳ ಮದುವೆಯಾಗು ವುದೇ ಅಶಕ್ಯವಿದೆ. ಈ ಸುದ್ದಿಯು ಮಠಾಧಿಕಾರಿಗಳ ಕಿವಿಗೆ ನಿಲುಕಿದರಂತೂ ಕೆಲಸವೇ ಮುಗಿಯಿತು. ಸಮಾಜದಿಂದ ಬಹಿಷ್ಕೃತರಾಗಬೇಕಾಗುವುದು. ಜಾತಿಯಿಂದ ಹೊರಗೆ ಹೋಗುವ ವೇಳೆಯು ಒದಗುವುದು. ಸುಮ್ಮನೆ ನನ್ನ ಮಾತನ್ನು ಕೇಳಿರಿ ’ ಎಂದು ಖಂಡಿತವಾಗಿ ಹೇಳಿ ಹೋಗಿರುವನು. ಆ ನೀಚನು ಎಂತಹ ಅನ್ಯಾಯವನ್ನು ಮಾಡಲಿಕ್ಕೂ ಹೇಸದವನು. ದೇವಾ ! ದೇವಾ ! ಏತಕ್ಕಿಷ್ಟು ನನ್ನ ಪರೀಕ್ಷೆ ಮಾಡುತ್ತಿರುವೆಯಪ್ಪಾ !........ ” ಸೀತಮ್ಮ ದೊಡ್ಡದಾಗಿ ದನಿ ತೆಗೆದು ಅಳಲು ತೊಡಗಿದರು. ಶಾಮಲೆಗೂ ದುಃಖವು ಉಕ್ಕಿ ಬಂದಿತು. ಒಬ್ಬರನ್ನೊಬ್ಬರು ನೋಡುತ್ತ ಅದೆಷ್ಟೋ ವೇಳೆಯ ವರೆಗೆ ಅಳುತ್ತಲೇ ಕುಳಿತಿದ್ದರು. ಅವರನ್ನು ಸಂತಯಿಸಲಿಕ್ಕೆ ಬೇರೆ ಯಾರು ಬರುವರು ?

ಮರಳಿ ತಾವೇ ಅಳುವನ್ನು ನುಂಗಿಕೊಂಡರು. ಬಹಳ ವೇಳೆಯ ವರೆಗೆ ಮಾತನಾಡಿ ಯಾವುದೋ ಮಾತಿನ ನಿಶ್ಚಯವನ್ನು ಮಾಡಿದರು. ನಡುನಡುವೆ ಇಬ್ಬರೂ ಅಳುವರು. ಮತ್ತೆ ಒಬ್ಬರನ್ನೊಬ್ಬರು ಸಂತಯಿಸು ವರು. ಅಂದು ಇಬ್ಬರಿಗೂ ರಾತ್ರಿಯಲ್ಲಿ ಊಟವಿಲ್ಲ, ಉಡಿಗೆಯಿಲ್ಲ.

## ೭

ಸೀತಮ್ಮ ಶಾಮಲೆ ಮಾತನಾಡುತ್ತ ಕುಳಿತಿದ್ದರು.

“ ಅಮ್ಮಾ ! ನೀನಿನ್ನು ಅಳುವುದನ್ನು ಸಾಕುಮಾಡು. ಇನ್ನು ಮೂರು ದಿನಗಳಿಗೆ ನನ್ನ ವಿವಾಹವಿಧಿಯು ಜರುಗಬೇಕಾಗಿಲ್ಲವೇ ? ಎಂತ ಹನೇ ಇರಲಿ ! ಸತಿಯರು ದೇವರೆಂದು ತಿಳಿದು ನಡೆಯಬೇಕಾಗುವ ಪತಿರಾಜನು, ನನ್ನ ಕೈಹಿಡಿದು ನನ್ನನ್ನು ಸೌಭಾಗ್ಯವತಿಯನ್ನಾಗಿ ಮಾಡಲಿದ್ದಾನೆ. ಇಂತಹ ಸುಸಮಯದಲ್ಲಿ ಅಮಂಗಲವಾದ ಅಳುವಿನ ಸಂಗತಿಯೇತಕ್ಕೆ ? ” ಶಾಮಲೆಯು ಗದ್ಗದಕಂಠೆಯಾಗಿ ನುಡಿದಳು.

“ ಶಾಮಲೇ ! ಇದು ಅಳುವಲ್ಲ. ನಿನ್ನ ಮದುವೆಯ ಸಮಾರಂಭ ದಲ್ಲಿ ಬಾರಿಸಬೇಕಾಗಿರುವ ಮಂಗಲವಾದ್ಯ. ಚೆನ್ನಾಗಿ ನುಡಿಸುವುದಕ್ಕೆ

ಈಗಲೇ ಅಭ್ಯಾಸ ಮಾಡುತ್ತಿರುವೆನು. ತಾಯೀ! ನಿನ್ನನ್ನು ಸೌಭಾಗ್ಯವತಿಯನ್ನಾಗಿ ಮಾಡಲು, ಆ ನಿನ್ನ ಗಂಡನೆನಿಸುವ ಅಜ್ಜನು ನಿನ್ನ ಕೈ ಹಿಡಿಯುತ್ತಾನೆಯೆ? 'ನನ್ನೊಡನೆ ಚಿತೆಯನ್ನೇರಲು ಬಾ!' ಎಂದು ಕರೆಯುತ್ತ, ಕೈಹಿಡಿದು ಎಳೆಯುವನು. ನಿನ್ನನ್ನು ಅಖಂಡ ಮಂಗಲವತಿಯನ್ನಾಗಿ ಮಾಡುವನು. ಶಾಮಾ! ನೀನು ಈಗಲೇ ಸತ್ತುಹೋಗೆ! ಆ ಮುದಿಮಗನ ಮುಂದೆ ನಿಂತಿರುವ ನಿನ್ನ ತಲೆಯ ಮೇಲೆ ಅಕ್ಷತೆ ಹಾಕುವುದಕ್ಕಿಂತಲೂ, ನಿನ್ನ ಶವದಹನದ ಕಾರ್ಯವನ್ನು ನನ್ನ ಕೈಗಳು ಹೆಚ್ಚು ಆನಂದದಿಂದ ಮಾಡುತ್ತವೆ. ನಿಜವಾಗಿಯೂ ನೀನು ಸತ್ತುಬಿಡು....... " ಸೀತಮ್ಮ ಮಾತನಾಡಿ, ಇನ್ನಿಷ್ಟು ಹೆಚ್ಚಾಗಿ ಅಳಲು ತೊಡಗಿದರು.

" ಅಮ್ಮಾ! ಸುಮ್ಮನಿರೇ ತಾಯಿ! ನಮ್ಮ ನಮ್ಮ ಕರ್ಮದಂತೆ ನಮಗೆ ಫಲವು ದೊರೆಯುವುದೆಂದು, ಆಗಾಗ ನನಗೆ ನೀತಿಯನ್ನು ಹೇಳುತ್ತಿದ್ದೆ. ಈಗ ನೀನೇ ಹುಚ್ಚಿಯಂತೆ ಮಾಡುತ್ತಿರುವೆಯಲ್ಲ! ಹೀಗೆ ನೀನು ಅಳುತ್ತ ಕುಳಿತರೆ, ನನಗೆ ಧೈರ್ಯ ಹೇಳುವವರಾರಮ್ಮಾ? ದುಃಖಾಗ್ನಿಯಲ್ಲಿ ಬೆಂದು ಬೆಂದು ಪರಿಶುದ್ಧವಾಗಿರುವ ನಿನ್ನ ದಿವ್ಯವಾಣಿಯಿಂದ, ನನಗೆ ಹರಕೆಯನ್ನು ಕೊಡೇ! ಹಡೆದಮ್ಮಾ! ನಿನ್ನ ಆಶೀರ್ವಾದದ ಬಲದಿಂದ, ಸಾವಿತ್ರಿಯಂತೆ ಸತ್ತುಹೋದ ಗಂಡನನ್ನು ಕೂಡ ಮರಳಿ ಪಡೆಯುತ್ತೇನೆ. ಏಳು, ಈ ನಿನ್ನ ಮಗಳಿಗೆ, ಸಂಜೀವಿನಿಯಂತೆ ಸಹಾಯಕವಾಗುವ ಒಂದೇ ಒಂದು ಹುರುಳುಳ್ಳ ಹರಕೆ ಕೊಡು." ಶಾಮಲೆಯು ಗಂಭೀರಭಾವದಿಂದ ಹೇಳಿದಳು.

" ಮಗೂ! ನನ್ನ ಹರಕೆಯಲ್ಲಿ ಹುರುಳುಂಟೇ? ಏನೆಂದು ನಿನ್ನನ್ನು ಹರಸಲಿ? 'ಮದುವೆಯಾದ ಮರುದಿನವೇ ಚಿತೆಯನ್ನೇರು' ಎಂದೇನು? ಕಂದ! ಆಗೇನೋ ಎನಿಸಿತು—ನನ್ನ ಮಗಳು ಹೊಟ್ಟೆತುಂಬ ಉಂಡುಕೊಂಡಾದರೂ ಇರುವಳಲ್ಲ—ಎಂದು ಎಂತಲೇ ಆ ಜೀವವಿರುವ ಹೆಣಕ್ಕೆ ಕೊಡಲು ಸಮ್ಮತಿಸಿದೆನು; ನನ್ನ ಮಗಳು ಜೀವದಿಂದಿದ್ದರೂ ಸಾಕು ಎಂದೆನು; ಆದರೆ ಈಗ, ನೀನು ಸತ್ತು ಹೋದರೆ ಹೆಚ್ಚು ಚೆನ್ನಾಗುವುದು.... ಎನಿಸುವುದು. ನೀಚಾ! ಮನೆಮುರುಕಾ! ಗುಂಡಾಭಟ್ಟಾ! ನನ್ನ ಹೆಣ್ಣಿನ ತಳಮಳಿಕೆಯು ಜನ್ಮಜನ್ಮಾಂತರದಲ್ಲಿಯೂ ನಿನ್ನ ಉಡಿಯೊಳಗೆ ಕಟ್ಟಿರಲಿ! ದೇವಾ! ನಿನ್ನ ಕೃಪೆಯಿಂದ ಎಂತೆಂತಹ ಕುತ್ತುಗಳನ್ನೂ ದಾಟಿ, ಇದುವರೆಗೂ ಬದುಕಿ

ಕೊಂಡೆ. ಇನ್ನು ನನ್ನಿಂದದು ಸಾಧ್ಯವಿಲ್ಲ. ಶಾಮಾ! ಮಗಳೇ! ನೀನು ಹುಟ್ಟದಿದ್ದರೆ ಸರಿಯಾಗುತ್ತಿತ್ತು ನೋಡು."

"ಹಾಗಾದರೆ ನಾನು ಸತ್ತುಬಿಡಲೇ?" ಶಾಮಲೆ ಒಂದುವಿಧ ವಾದ ಸ್ವರದಿಂದ ಕೇಳಿದಳು.

"ನೀನೊಬ್ಬಳೇ ಏಕೆ? ಇಬ್ಬರೂ ಕೂಡಿಯೇ ಸಾಯೋಣ. ನಾರಾ ಯಣಾ! ಸಾಕುಮಾಡಿ ಬಿಡಪ್ಪಾ ಈ ಜನ್ಮವನ್ನು!" ಎಂದು ನುಡಿದು, ಸೀತಮ್ಮ ನಿಡುಸುಯ್ದು ಹುಚ್ಚಿಯಂತಾಗಿ ಸುಮ್ಮನೆ ಕುಳಿತರು. ಶಾಮ ಲೆಯೂ ತಾಯಿಯ ಕಡೆಗೆ ಮಿಳಮಿಳನೆ ನೋಡುತ್ತ, ಮೈಯಲುಗಿಸದೆ ಕುಳಿತಿದ್ದಳು. ಇಬ್ಬರೂ ಕಲ್ಲಿನಂತೆ ನಿಶ್ಚಲರು.

ಶಾಮಲೆಯು ಮೇಲಕ್ಕೆ ಮುಖ ಮಾಡಿದಳು. ಅಂತಹ ಸ್ಥಿತಿಯ ಲ್ಲಿಯೇ ಹಾಡಲು ತೊಡಗಿದಳು. "ಕರುಣಾಕರ ನೀನೆನ್ನುವುದೇಕೋ ಭರ ವಸವಿಲ್ಲನಗೆ." ಆದೆಂತಹ ಹಾಡು! ಹೊಟ್ಟೆಯುರಿಯನ್ನು ತಾಳದೆ ಹೊರಟ ದುಃಖೋದ್ಗಾರ.

ಶಾಮಲೆಯು ಹಾಡುತ್ತಿದ್ದ ಸಮಯಕ್ಕೆ ಸರಿಯಾಗಿ ಅಂಚೆಯ ಜವಾನನು ಅಲ್ಲಿಗೆ ಬಂದನು. "ನಿಮ್ಮ ಹೆಸರಿನಿಂದ ಎಲ್ಲಿಯದೋ ಇದೊಂದು ಓಲೆ ಬಂದಿದೆ ನೋಡಿ" ಎಂದು ನುಡಿದು, ಬಾಗಿಲಲ್ಲಿಯೆ ಓಲೆಯನ್ನೊ ಗೆದು, ಹೊರಟುಬಿಟ್ಟನು. ಸೀತಮ್ಮ ಕದಲದೆ ಕುಳಿತುಕೊಂಡಿದ್ದರು.

'ತಮ್ಮ ಮನೆಗೆ ಎಂದೂ, ಯಾರಿಂದಲೂ, ಸಮಿಾಪದಲ್ಲಿ ಓಲೆಬಂದಿಲ್ಲ; ಇಂದು ಇದೆಲ್ಲಿಯದು ಬಂದಿತು?' ಎಂದು ಶಾಮಲೆಗೆ ಆಚ್ಚರಿಯಾಯಿತು. ಹಾಗೆಯೇ ಎದ್ದು ಬಂದು, ಆತುರದಿಂದ ಓಲೆಯನ್ನೊಡೆದು, ಮನದಲ್ಲಿಯೇ ಓದಲು ಮೊದಲು ಮಾಡಿದಳು. ಓಲೆಯನ್ನು ಓದುತ್ತ ಹೋದಂತೆ ಶಾಮ ಲೆಯ ಮುಖವು ಹಿಗ್ಗಲು ತೊಡಗಿತು. ಕಣ್ಣಲ್ಲಿ ನೀರು ತುಂಬಿ, ನಡುವೇ ಅಕ್ಷರಗಳು ಕಾಣದಂತಾದುವು. ಬೆರಳಿನಿಂದ ಕಂಬನಿ ಮಿಡಿದಳು. ಓಲೆಯ ನ್ನೋದಿ ಮುಗಿಸಿದಳು. ಒಮ್ಮೆಲೆ ಸದ್ಗದಿತಕಂಠೆಯಾಗಿ ಒತ್ತಿ ಮಾತನಾ ಡಿದಳು.

"ಅಮ್ಮಾ, ಪರಮಾತ್ಮನು ನಿಜವಾಗಿಯೂ ಕರುಣಾಕರನು. ಅನಾಥ ಬಂಧುವು. ಆತನು ತನ್ನ ಕರುಣಾಕರತೆಯ ಸಾಕ್ಷಿಯನ್ನು ಆಗಾಗ ನಮ್ಮ ಅನುಭವಕ್ಕೆ ತಂದುಕೊಡುತ್ತಿದ್ದರೂ ಮತ್ತೆ ಮತ್ತೆ ವ್ಯರ್ಥವಾಗಿ

ನಾವು ಅವನನ್ನು ದೊರಿಕೊಳ್ಳುವೆವು...." ಶಾಮಲೆಯು ಇನ್ನೂ ಏನೇನನೋ ಮಾತನಾಡುವವಳಿದ್ದಳು. ಸೀತಮ್ಮ ನಡುವೆ ತಡೆದು ನಿಲ್ಲಿಸಿದಳು.

"ಶಾಮು ! ಏನೆನ್ನುತ್ತಿದ್ದೀಯೋ? ನನಗೇನೂ ನಿನ್ನ ಮಾತಿನ ಅರ್ಥವಾಗಲೊಲ್ಲದು. ಯಾರ ಪತ್ರವದು? ಅದರಲ್ಲೇನು ಬರೆದಿದೆ?"

"ವಿಜಯಪುರದಲ್ಲಿ ನಮ್ಮ ಮನೆಯೊಳಗಿದ್ದನಲ್ಲ–ಜವಾನ ಲಚ್ಚಪ್ಪನ ಮಗ ಗೋವಿಂದ; ಆತನ ಪತ್ರವಿದು."

"ಏನು, ಗೋವಿಂದನ ಪತ್ರವೆ? ಏನೆಂದು ಬರೆದಿದ್ದಾನೆ? ಗಟ್ಟಿಯಾಗಿ ಓದು ನೋಡೋಣ" ಶಾಮಲೆಯು ಓಲೆಯನ್ನು ಓದಲು ತೊಡಗಿದಳು.

ವಿಜಯಪುರ

ತಾ। ...........

ಪ್ರಿಯ ಮಾತೃಸಮಾನರಾದ ಸೀತಮ್ಮನವರ ಚರಣಸನ್ನಿಧಿಗೆ:—ಬಾಲಕ ಗೋವಿಂದನು ಮಾಡುವ ಶಿ. ಸಾ. ನ. ವಿ. ವಿ.

ತಾಯೀ !

ತಮ್ಮ ಕಡೆಯ ಸುದ್ದಿ ತಿಳಿಯದೆ ಬಹಳ ದಿನಗಳಾದುವು. ಇಲ್ಲಿಂದ ಹೋದಂದಿನಿಂದ, ತಮ್ಮ ಕ್ಷೇಮವಾರ್ತೆಯೇ ನನಗೆ ತಿಳಿದಿಲ್ಲ. ವಿದ್ಯಾಭ್ಯಾಸದ ಗೊಂದಲದಲ್ಲಿ ನನಗೆ ಅದನ್ನು ತಿಳಿದುಕೊಳ್ಳಲು ಅನುಕೂಲ ಕಾಲವೂ ದೊರೆಯಲಿಲ್ಲ. ಎಂತಲೇ ತಮಗೆ ಓಲೆಗಳನ್ನೇ ಬರೆದಿಲ್ಲ. ನನ್ನ ಇದೊಂದು ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು.

ವಿದ್ಯಾಭ್ಯಾಸಕ್ಕಾಗಿ ನಾನೆಷ್ಟೋ ಕಷ್ಟನಷ್ಟಗಳನ್ನು ಸಹಿಸಿದೆನು. ಹಲವು ರೀತಿಯಿಂದ ಹೆಣಗಿದೆನು. ದೇವರ ದಯೆಯಿಂದಲೂ, ತಮ್ಮ ಹರಕೆಯಿಂದಲೂ, ಕಳೆದ ವರ್ಷವೇ ಎಲ್. ಎಲ್. ಬಿ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿ, ಇದೇ ಊರಲ್ಲಿಯೇ ವಕಾಲತ್ತು ನಡೆಯಿಸುತ್ತಿರುವೆನು. ಉದ್ಯೋಗವು ಚೆನ್ನಾಗಿ ನಡೆದಿದೆ. ಆಫೀಸಿನಲ್ಲಿಯ ತಾಸಿನ ಗಂಟೆಯನ್ನು ಬಾರಿಸಿ ಹೊಟ್ಟೆಹೊರೆದುಕೊಳ್ಳಬಹುದಾದ ನನ್ನನ್ನು, ಈ ಯೋಗ್ಯತೆಗೆ ತಂದ ಶ್ರೇಯಸ್ಸೆಲ್ಲವೂ ತಮ್ಮ ಪತಿದೇವರಾದ ಶೀ. ರಾಮರಾಯರದು. ಆ ಮಹಾತ್ಮನ ಉಪಕಾರವನ್ನು ತೀರಿಸುವುದಕ್ಕೆ ನನಗೆಂದಿಗೂ ಸಾಧ್ಯವಿಲ್ಲ.

ಮೊನ್ನೆ ಗದುಗಿನಿಂದ ನಮ್ಮ ಮಿತ್ರರೊಬ್ಬರು ಬಂದಿದ್ದರು. ನಿಮ್ಮ ವಿಷಯವಾಗಿ ನಾನು ಅವರನ್ನು ಕೇಳಿದೆ. ಸದ್ಯಕ್ಕೆ ನೀವು ತುಂಬ ಕಷ್ಟದಲ್ಲಿ ರುವಿರೆಂಬುದು ನನಗೆ ತಿಳಿಯಿತು. ಚಿ. ಶಾಮಲೆಯ ಲಗ್ನವೂ ಇನ್ನೂ ಆಗಿಲ್ಲವೆಂಬುದು ನನಗೆ ತಿಳಿಯಿತು. ಶಾಮಲೆಯು ನನ್ನ ಧರ್ಮದ ತಂಗಿ. ಅವಳ ಕಲ್ಯಾಣವನ್ನು ಕಟ್ಟಿ, ಶೀ. ರಾಮರಾಯರಿಂದಾದ ಉಪಕಾರದ ಭಾರ ವನ್ನು ಕೊಂಚವಾದರೂ ಕಡಿಮೆಮಾಡಿಕೊಳ್ಳಬೇಕೆಂದು ಎಣಿಸಿರುವೆನು. ಅದಕ್ಕಾಗಿಯೇ ಚಿ. ಶಾಮಲಕ್ಕನ ಹೆಸರಿನಿಂದ, ನನ್ನ ಉತ್ಪನ್ನದೊಳಗಿನ ಮೊದಲಿನ ಎರಡು ಸಾವಿರ ರೂಪಾಯಿಗಳನ್ನು ತೆಗೆದಿಟ್ಟಿರುವೆನು.

ನಿಮ್ಮನ್ನು ನೋಡಬೇಕೆಂಬ ಹಂಬಲು ಬಹಳವಾಗಿದೆ. ನಾಡಿದ್ದು ಅಂಚೆಯ ಉಗೆಬಂಡಿಯಿಂದ ಗದುಗಿಗೆ ಹೊರಟುಬರಬೇಕೆಂದು ಗಟ್ಟಿಮಾಡಿ ರುವೆನು. ಬರುವಾಗ ಶಾಮಲಕ್ಕನಿಗೆ ಕೊಡಲಿರುವ ಹಣವನ್ನೂ ತೆಗೆದು ಕೊಂಡು ಬರುವೆನು. ಉಳಿದುದೆಲ್ಲ ಸುಖವಾಗಿದೆ. ಇಂತು ವಂದನೆಗಳು.

ತಮ್ಮ ಹರಕೆಯನ್ನಾಶಿಸುವ,

**ಗೋವಿಂದ.**

ಓಲೆಯನ್ನೋದಿಸಿ ಕೇಳಿ, ಸೀತಮ್ಮನ ಮೊಗವು ಹಿಗ್ಗಿ ಇಷ್ಟಗಲ ವಾಯಿತು. ನಿರಾಶೆಯಿಂದ ತುಂಬಿ ತುಳುಕುತ್ತಿದ್ದ ಕಣ್ಣುಗಳಲ್ಲಿ, ಈಗ ಮತ್ತೆ ಆಶೆಯು ಬಂದು ಮನೆಮಾಡಿತು. ಎದ್ದು ಬಂದು ಶಾಮಲೆಯನ್ನು ಬಿಗಿಯಾಗಿ ಅಪ್ಪಿಕೊಂಡರು.

“ ಧನ್ಯ ಧನ್ಯ! ದೇವಾ! ನಿನ್ನ ಲೀಲೆಯು ಅಗಾಧವಾದುದು. ಎಂದಿನ ವಿಜಯಪುರ! ಎಲ್ಲಿಯ ಗೋವಿಂದ! ಎಲ್ಲಿಯ ಹತಭಾಗಿನಿಯರಾದ ಈ ಸೀತಮ್ಮ ಶಾಮಲೆಯರು! ಒಂದರದೊಂದು ಸಂಬಂಧವಿರದ ಸರಪಳಿ ಯನ್ನು ಅದು ಹೇಗೆ ಒಂದೇ ಕ್ಷಣದಲ್ಲಿಯೇ ಕೂಡಿಸಿದೆ! ಶಾಮಾ! ನೋಡಿದೆಯಾ ? ಆ ದೇವರಾಯನ ಅಘಟಿತ ಘಟನೆಯನ್ನು! ಕಂದಮ್ಮಾ! ದೈವದೊಡನೆ ಹಿಡಿದ ಕುಸ್ತಿಯಾಟದಲ್ಲಿ ನೀನಿಂದು ನಿಜವಾಗಿಯೂ ಜಯ ವನ್ನು ಪಡೆದೆಯೆ! ದುರ್ದೈವವನ್ನು ಕಾಲ ಕೆಳಕ್ಕೆ ಹಾಕಿ ಮೆಟ್ಟುವಂತಹ ಕಸರತ್ತನ್ನು ನೀನೆಲ್ಲಿಂದ ಕಲಿತೆಯಮ್ಮಾ! ಇನ್ನಾದರೂ ಶಶಿಧರನು ನಿನ್ನವ ನಾಗಬಹುದೇನು? ಆಗುವನು! ನಿಜವಾಗಿಯೇ ಆಗುವನು! ಎಂತಲೇ

ವರದಕ್ಷಿಣೆಯ ಹಣಕ್ಕಾಗಿ, ಪರಮಾತ್ಮನು ಈ ಹುಂಡಿಯ ಪತ್ರವನ್ನು ಬರೆಯಿಸಿ ಕಳುಹಿಸಿರುವನು. ದೇವಾ! ಈ ದೀನೆಯು ಏನು ಮಾಡಿ ಈ ಉಪಕಾರವನ್ನು ತೀರಿಸಬಲ್ಲಳು!'' ಸೀತಮ್ಮ ಕಳವಳದಿಂದ ನುಡಿದರು. ಶಾಮಲೆಗಂತೂ ತಾನು ಆನಂದದಲ್ಲಿರುವೆನೋ? ದುಃಖದಲ್ಲಿರುವೆನೋ ಎಂಬುದರ ಅರಿವು ಉಂಟಾಗಬೇಕಾದರೆ, ಎಷ್ಟೋ ವೇಳೆ ಬೇಕಾಯಿತು.

ನವ್ಹೆಂಬರ್ ೧೯೩೬

---

# ಮಂಜಿನ ನೀರು



## ೧

ಬೆಳಗಿನ ಎಂಟುವರೆ ಗಂಟೆಯಾಯಿತು. ಶ್ರೀನಾಥ ತನ್ನ ಕಿರುಮನೆಯನ್ನು ಬಿಟ್ಟು ಇದುವರೆಗೂ ಹೊರಕ್ಕೆ ಬಂದಿರಲೇ ಇಲ್ಲ. ಇರುಳು ಮಲಗಿದ ಹಾಸಿಗೆ ಹಾಗೆಯೆ ಇದೆ; ಹೊದ್ದಿಕೆಯು ಬಳಿಯಲ್ಲಿಯೇ ಅಸ್ತವ್ಯಸ್ತವಾಗಿ ಬಿದ್ದುಕೊಂಡಿದೆ. ಹಾಸಿಗೆಯ ತಲೆಯ ಕಡೆಗೆ ದಿಂಬಿನ ಮೇಲೆ ತೊಡೆಗಳನ್ನಿಟ್ಟು, ಮುಖ ಕೆಳಗೆ ಮಾಡಿಕೊಂಡು, ಶ್ರೀನಾಥ ಕುಳಿತಿರುವನು. ಬಲದ ಕೈಯಲ್ಲಿ ಫೌಂಟನ್‌ಪೆನ್ನು; ಮುಂದೆಯೆ ನೆಲದ ಮೇಲೆ ಕರಡು ಕಾಗದ. ಮೈಯನ್ನು ತೂಗುತ್ತ ತೂಗುತ್ತ ನಡುನಡುವೆ ಏನೇನೋ ಯೋಚಿಸುವನು; ಬಳಿಕ ಕರಡು ಕಾಗದಗಳ ಮೇಲೆ ಸರಸರನೆ ಬರೆಯುವನು. ಕಿರುಮನೆಯೊಳಗೆ ಹಗಲಿನ ಬೆಳಕು ಸಾಕಷ್ಟು ಬಂದಿದ್ದಿತಾದರೂ ಹಚ್ಚಿಟ್ಟಿದ್ದ ದೀಪ-ಪರಾಜಯ ಹೊಂದಿದ ಪಂಡಿತನ ಮುಖದಂತೆ— ಕಳೆಗುಂದಿದುದಾಗಿ ಹಾಗೆಯೆ ಉರಿಯುತಿರುವುದು. ವ್ಯರ್ಥವಾಗಿ ದೀಪ ಉರಿಯುತಿರುವುದರ ಕಡೆಗೆ ಶ್ರೀನಾಥನ ಲಕ್ಷ್ಯವೇ ಇರಲಿಲ್ಲ. ಗಡಿಯಾರದಲ್ಲಿ ಎಂಟುವರೆಯ ಗಂಟೆ ಬಾರಿಸಿದಾಗ ಆತನಿಗೆ ನಸು ಅರಿವು ಬಂದಂತಾಯಿತು. ಗಡಿಯಾರದ ಕಡೆಗೆ ನೋಡಿದನು. “ಅಬ್ಬಾ! ಎಂಟುವರೆ ಗಂಟೆಯಾಯಿತೇನು?” ಎಂದು ತನ್ನಲ್ಲಿ ತಾನೆ ನುಡಿದುಕೊಂಡನು. ಮತ್ತೆ ತನ್ನ ಕೆಲಸದಲ್ಲಿಯೆ ತೊಡಗಿದನು.

ಲಲಿತಮ್ಮ– ಶ್ರೀನಾಥನ ಹೆಂಡತಿ– ನಿತ್ಯನಿಯಮದಂತೆ ನಸುಕಿನಲ್ಲಿಯೆ ಎದ್ದು, ತನ್ನ ಮನೆಗೆಲಸದಲ್ಲಿ ತೊಡಗಿದಳು. ಅಂಚೆಯಾಳು ಬಂದು ಕೆಲವು ಕಾಗದಗಳನ್ನು ಬಾಗಿಲಲ್ಲಿ ಹಾಕಿ ಹೊರಟುಹೋದನು. ಲಲಿತಮ್ಮ ನೋಡಿ, ಆ ಕಾಗದಗಳನ್ನು ಎತ್ತಿ ತೆಗೆದುಕೊಂಡಳು. ಕಿರುಮನೆಯ ಕಡೆಗೆ ನಡೆದಳು. ಬಾಗಿಲ ಹೊರಗೆಯೆ ನಿಂತು ಒಳಗಿನ ಚಿತ್ರವನ್ನೆಲ್ಲ ನೋಡಿದಳು. ಬೇಸರುಗೊಂಡವಳಂತೆ ಮೋರೆ ಮುದುಡಿಸಿದಳು. ಲಲಿತಮ್ಮ ಬಂದು ನಿಂತುದರ ಅರಿವೇ ಶ್ರೀನಾಥನಿಗಿರಲಿಲ್ಲ. ಬೇಸರು ಬೆರೆತ ದನಿಯಲ್ಲಿ ಲಲಿತಮ್ಮ ಮಾತನಾಡಿದಳು.

"ಒಂಬತ್ತು ಗಂಟೆಗೆ ಬಂದಿತು. ಇದುವರೆಗೂ ಹಾಸಿಗೆಯನ್ನೇ ಬಿಟ್ಟು ಎದ್ದಿಲ್ಲ. ದೀಪ ಉರಿದುರಿದು ಹಾಳಾಗುತ್ತಿದೆ; ಅದನ್ನು ಆರಿಸಿಬಿಟ್ಟಾದರೂ ಕುಳಿತುಕೊಳ್ಳಬಾರದಿತ್ತೇ!"

ಶ್ರೀನಾಥ ಮೈಟ್ಟಿಬಿದ್ದವನಾಗಿ ಲಲಿತಮ್ಮನ ಕಡೆಗೆ ನೋಡಿದ. ಕೈಯಲ್ಲಿ ಅಂಚೆಯ ಕಾಗದಗಳಿದ್ದುವು. ಲಲಿತಮ್ಮನಾಡಿದ ಮಾತಿಗೆ ಮರುನುಡಿಯನ್ನೇನೂ ಹೇಳದೆ, ಕಿರುನಗೆ ನಗುತ್ತ, ಅವಸರದ ದನಿಯಲ್ಲಿ "ಏನು ಅಂಚೆ ಬಂದಿತೇ? ನೋಡೋಣ ತಾ ಇಲ್ಲಿ!" ಎಂದನು.

ಲಲಿತಮ್ಮ ಮಾತನೇನೂ ಆಡದೆ ಕೊಂಚ ಕೋಪದ ಭಾವದಿಂದ ಅಂಚೆಯ ಕಾಗದಗಳನ್ನು ಗಂಡನೆದುರಿಗೆ ಚೆಲ್ಲಿದಳು. ಕಿರುಮನೆಯೊಳಕ್ಕೆ ಹೋಗಿ ದೀಪವನ್ನಾರಿಸಿದಳು. ಬಿದ್ದಿದ್ದ ಹೊದ್ದಿಕೆಯನ್ನು ಸರಿಯಾಗಿ ಮಡಿಸಿಡಲು ತೊಡಗಿದಳು. ಶ್ರೀನಾಥ ಹಾಸಿಗೆಯನ್ನು ಬಿಟ್ಟು ಎದ್ದ. ಅಲ್ಲಿಯೆ ಇಟ್ಟಿದ್ದ ಕುರ್ಚಿಯೊಂದರ ಮೇಲೆ ಕುಳಿತು, ಅಂಚೆಯನ್ನು ನೋಡಲು ತೊಡಗಿದ.

ಲಲಿತಮ್ಮ ಹಾಸಿಗೆಯನ್ನು ಸುತ್ತಿಟ್ಟಳು. ಕಿರುಮನೆಯಲ್ಲಿದ್ದ ಇನ್ನುಳಿದ ವಸ್ತುಗಳನ್ನೂ ಓರಣವಾಗಿಟ್ಟಳು. ಬಳಿಕ ಶ್ರೀನಾಥನ ಬಳಿಗೆ ಬಂದು, ಕುರ್ಚಿಯ ಬಲದ ತೋಳಮೇಲೆ ತನ್ನ ಎರಡೂ ಕೈಗಳನಿಟ್ಟು ನಿಂತುಕೊಂಡಳು. ಆಗ ಶ್ರೀನಾಥನ ಮುಖದ ಮೇಲೆ ಉತ್ಸಾಹವು ತುಂಬಿ ತುಳುಕುತ್ತಿದ್ದಿತು. ಅಭಿಮಾನದ ಕಿರುನಗೆಯು ಒಪ್ಪುತ್ತಿದ್ದಿತು. ಲಲಿತಮ್ಮ ನೋಡಿದಳು; ಕುತೂಹಲ ಭಾವದಿಂದ ಕೇಳಿದಳು. "ಇಂದಿನ ಅಂಚೆಯಲ್ಲಿ ವಿಶೇಷವೇನಾದರೂ ಇದೆಯೇ?"

ಹೆಮ್ಮೆಯ ಮುಗುಳುನಗೆಯ ಮೊಗದಿಂದ ಶ್ರೀನಾಥ ಹೆಂಡತಿಯ ಕಡೆಗೆ ನೋಡಿದ. "ಇದು ನೋಡು" ಎಂದು ಒಂದು ಓಲೆಯನ್ನು ತೆಗೆದು ಕೊಂಡು ಓದಲು ತೊಡಗಿದ.

"ಮಹಾಶಯ! ತಾವು ಕಳುಹಿಸಿದ 'ಪಾರಿಜಾತ' ಎಂಬ ಕತೆಯು ಬಂದು ತಲ್ಪಿತು. ಈ ಬಗೆಯ ಕತೆಯನ್ನು ನಾನು ಇದುವರೆಗೆ ಯಾವ ಭಾಷೆಯಲ್ಲಿಯೂ ಓದಿಲ್ಲ. ತಮ್ಮಂತವರಿಂದಲೆ ಕನ್ನಡನುಡಿಯ ಉನ್ನತಿ ಯಾಗಬೇಕಾಗಿದೆ. ಕನ್ನಡನಾಡಿಗೆ ಒಳ್ಳೆಯ ಕಾಲ ಬಂದಿದೆ. ಆಗಾಗ ತಮ್ಮ ಕತೆಗಳು ನಮ್ಮ ಪತ್ರಿಕೆಯಲ್ಲಿ ಪ್ರಕಟವಾಗುವುವೆಂದು ನಾನು ನಂಬಿ ಕೊಂಡಿರಲೇ!"

ಪತ್ರಿಕೆಯ ಸಂಪಾದಕರೊಬ್ಬರ ಓಲೆಯಿದು. ಓದುವುದಾದ ಮೇಲೆ ಶ್ರೀನಾಥ, ಅಭಿಮಾನಪೂರಿತ ದೃಷ್ಟಿಯಿಂದ ಹೆಂಡತಿಯನ್ನು ನೋಡಿದ. ಬಳಿಕ ಮತ್ತೊಂದು ಕಾಗದವನ್ನು ಓದಲಾರಂಭಿಸಿದ.

"ಪ್ರಿಯ ಮಹನೀಯರೆ,

ನಾನು ನಿಮಗೆ ಅಪರಿತ. 'ಹೂದೋಟ' ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಗಿದ್ದ ತಮ್ಮ 'ವಿರಹಿಣಿ' ಎಂಬ ಕವಿತೆಯನ್ನೋದಿ ಹುಚ್ಚನಾದ ವನು ನಾನು. 'ನಮ್ಮ ನಾಡಿನಲ್ಲಿಯೂ ಇಂತಹ ಕವಿತೆಗಳನ್ನು ರಚಿಸುವ ಕಬ್ಬಿಗರು ಇರುವರಲಾ!' ಎಂಬ ಹೆಮ್ಮೆಯಿಂದ ಕುಣಿದವನು ನಾನು. ನಮ್ಮ ಭಾಷೆಯ ಈ ಹೊಸ ಬಗೆಯ ಕವಿತೆಯ ಸವಿಯು, ಬೇರೆ ಭಾಷೆ ಯವರಿಗೆ ತಿಳಿಯಬೇಕೆಂತು! ಈಗ ತಮ್ಮಲ್ಲಿ ನನ್ನದೊಂದು ಕೋರಿಕೆ. ನನ್ನ ಸ್ನೇಹಿತರೊಬ್ಬರು ಇಂಗ್ಲಿಷ್ ಸಾಹಿತ್ಯದಲ್ಲಿ ಗಟ್ಟಿಗರು. ಅವರು ತಮ್ಮ 'ವಿರಹಿಣಿ' ಕವಿತೆಯನ್ನು ಆ ಭಾಷೆಯಲ್ಲಿ ಅನುವಾದಿಸಬೇಕೆಂದಿರುವರು. ಇದಕ್ಕೆ ತಾವು ಒಪ್ಪಿಗೆ ಕೊಡುವ ಕೃಪೆ ಮಾಡಬೇಕಾಗಿ ಬೇಡುವೆನು. ಇದರಿಂದ ನಮ್ಮ ನಾಡಿನ ಹೆಸರನ್ನು ಮುಂದೆ ತಂದ ಶ್ರೇಯವು ತಮಗೆ ದೊರೆತಂತಾಗುವುದು.

ತಮ್ಮ ವಿಧೇಯ

+ + + + +"

ಇದನ್ನೆಲ್ಲ ಕೇಳಿ, ಲಲಿತಮ್ಮನ ಹಿಗ್ಗು ಹೊಟ್ಟೆಯಲ್ಲಿ ಹಿಡಿಸಲಾರದ ಷ್ಟಾಯಿತು. ಆಕೆಯ ಬೇಸರದ ಗಂಟುಮೋರೆ ಅರಳಿ ಇಷ್ಟಗಲವಾಯಿತು.

" ಅವರಿಗೆ ಒಪ್ಪಿಗೆ ಕೊಡಬಹುದಲ್ಲವೆ! " ಎಂದು ಕತ್ತನ್ನು ಅಲ್ಲಾಡಿಸುತ್ತ ಸಲುಗೆಯ ಮಾತಿನಿಂದ ಕೇಳಿದಳು.

" ಅದಕ್ಕೇನು ! ಇಂದೆಯೇ ಒಪ್ಪಿಗೆಯ ಕಾಗದ ಬರೆದುಬಿಡುವೆನು." ಎಂದು ಶ್ರೀನಾಥನು ನುಡಿದವನೆ ಇನ್ನೊಂದು ಕಾಗದ ಕೈಗೆ ತೆಗೆದುಕೊಂಡ; ಓದಲು ತೊಡಗಿದ.

" ರಾಯರೆ!

ಬಿ. ಎ. ತರಗತಿಗಾಗಿ ಕನ್ನಡ ಪಠ್ಯಪುಸ್ತಕಳನ್ನು ಅನುಗೊಳಿಸಬೇಕಾಗಿದೆ. ಅದಕ್ಕಾಗಿ ನೂತನ ಸಾಹಿತ್ಯದಲ್ಲಿ ಹೆಸರಾದ ಬರೆಹಗಾರರ, ಕವಿಗಳ ಬರೆಹ–ಕವಿತೆಗಳನ್ನು ಸಂಗ್ರಹಿಸಿ ಅಚ್ಚುಹಾಕಿಸಬೇಕಾಗಿದೆ. ಅದರಲ್ಲಿ ತಮ್ಮಂತಹ ಬಲ್ಲಿದರಾದ ಲೇಖಕರ ಕತೆ–ಕವಿತೆಗಳು ಇಲ್ಲದಿರುವುದೆಂದರೆ ದೊಡ್ಡದೊಂದು ಕೊರತೆ. ದಯೆಯಿಟ್ಟು ಈ ಕಾಗದ ಕಂಡೊಡನೆಯೆ ತಮ್ಮ ಕೆಲವು ಕವಿತೆಗಳನ್ನೂ ಒಂದು ಚಿಕ್ಕ ಕತೆಯನ್ನೂ ಕಳುಹಿಸಿ ಕೊಡುವುದಾಗಿ ಕೋರಿಕೆಯಿದೆ.

ಕಾರ್ಯದರ್ಶಿ

ಪಠ್ಯಪುಸ್ತಕ ಮಂಡಲ****"

ಓದುವುದಾಯಿತು. ಶ್ರೀನಾಥನು ಉಲ್ಲಾಸದಿಂದ ಉಬ್ಬಿದವನಾಗಿ ಹೇಳಿದ. " ಈಗ ಬರೆಯುತ್ತಲಿದ್ದ ಕತೆಯನ್ನೇ ಕಳುಹಿಸಿ ಬಿಡುವೆನು ಕೆಲವು ಒಳ್ಳೆಯ ಕವಿತೆಗಳನ್ನೂ ಆರಿಸಿ ಕೊಡಬೇಕು ! "

ಲಲಿತಮ್ಮ ಆನಂದದಿಂದ ಮೈಮರೆತುಹೋದಳು. ತನ್ನ ಎದೆಯನ್ನು ನೋಯಿಸುತ್ತಿದ್ದ ದುಗುಡವನ್ನೆಲ್ಲ ಮರೆತುಬಿಟ್ಟಳು. " ಇಂತಹ ಗಂಡನ ಹೆಂಡತಿಯಾಗುವ ಭಾಗ್ಯ ನನಗೆ ದೊರೆಯಿತಲ್ಲಾ! " ಎಂದು ತನ್ನಲ್ಲಿ ತಾನೆ ಅಭಿಮಾನಪಟ್ಟುಕೊಂಡಳು. ಅರಳಿದ ಕಣ್ಣುಗಳಿಂದ— ಹೊಸತಾಗಿಯೆ ನೋಡುತಿರುವಂತೆ– ಶ್ರೀನಾಥನನ್ನು ಅಡಿಯಿಂದ ಮುಡಿಯ ವರೆಗೆ ನಿಟ್ಟಿಸಿ ನೋಡಲು ತೊಡಗಿದಳು.

ಶ್ರೀನಾಥನು ಒಮ್ಮೆಲೆ ಹೇಳಿದನು. " ಲಲಿತಾ ! ನನಗೆ ಮತ್ತೆ ಬರೆಯುವ ಕೆಲಸವಿದೆ. ನಾನು ಈಗಲೆ ಎದ್ದು ಹೊರಕ್ಕೆ ಹೋಗಿ ಬರುವೆನು ; ಅಷ್ಟರಲ್ಲಿಯೆ ನೀನು ಕಾಫಿಮಾಡಿ ಇಟ್ಟಿರು ನಡೆ! "

" ಕಾಫಿ " ಎಂದು ಕೇಳಿದೊಡನೆಯೆ ಲಲಿತಮ್ಮನ ಆನಂದವೆಲ್ಲ

ಅಳಿದುಹೋಯಿತು. ಔದಾಸೀನ್ಯವು ಆಕೆಯ ಮುಖಕ್ಕೆ ಮುತ್ತಿಗೆ ಹಾಕಿತು. ಕುಗ್ಗಿದ ದನಿಯಲ್ಲಿ ಆಕೆ ಮಾತನಾಡಿದಳು.

"ಮನೆಯಲ್ಲಿ ಕಾಫಿಯಿಲ್ಲ, ಸಕ್ಕರೆಯಿಲ್ಲ. ಅಂಗಡಿಯ ಸಾಲ ಅಂಜಿಕೆ ಬರುವಷ್ಟು ಆಗಿ ಕುಳಿತಿದೆ. ಹಿಂದಿನದನ್ನು ಕೊಡದೆ ಹಾಗೆಯೆ ಮತ್ತೆ ತರಿಸುವುದೆಂದರೆ ನನಗೆ ನಾಚಿಕೆಯೆನಿಸುತ್ತಿದೆ. ನಿನ್ನೆ ಬಂದಾಗ 'ನಾಳೆಯಿಂದ ಹಾಲನ್ನು ಕೊಡುವುದಿಲ್ಲ!' ಎಂದು ಹಾಲಿನವಳು ನಿಷ್ಠುರ ವಾಗಿ ಹೇಳಿ ಹೋಗಿರುವಳು. ಎಲ್ಲವೂ ಸಾಲ ಸಾಲ ಎಂದರೆ ಕೊಡುವವ ರಾದರೂ ಎಷ್ಟೆಂದು ಕೊಟ್ಟಾರು?"

ಶ್ರೀನಾಥ ಸ್ವಲ್ಪ ಹೊತ್ತು ಸುಮ್ಮನೆ ಕುಳಿತ. ಬಳಿಕ ಯಾವ ಭಾವ ವನ್ನೂ ಹೊರಕ್ಕೆ ಹೊರಡಿಸದೆ, ಸಮಾಧಾನದ ಸ್ವರದಲ್ಲಿಯೆ ಮಾತನಾಡಿದ. "ಸರಿ! ಕಾಫೀ ಸಕ್ಕರೆ ಇಲ್ಲವೆ? ಇಲ್ಲದಿದ್ದರೆ ಇಲ್ಲ! ನನಗಿಂದು ಕಾಫಿಯೇ ಬೇಡಬಿಡು."

ಶ್ರೀನಾಥನು ಕಿರುಮನೆಯನ್ನು ಬಿಟ್ಟು ಹೊರಕ್ಕೆ ನಡೆದ. ಲಲಿತಮ್ಮ ಕುಳಿತುಕೊಂಡೇ ಕಿರುಮನೆಯ ಕಸಗೂಡಿಸಲು ತೊಡಗಿದಳು. ಕೊಂಚ ಗುಡಿಸುವಳು; ಪೊರಕೆಯನ್ನು ನೆಲದಲ್ಲಿಟ್ಟು ಸುಮ್ಮನೆ ಕುಳಿತುಕೊಳ್ಳುವಳು. ಏನೇನನೋ ಯೋಚಿಸುವಳು; ಮತ್ತೆ ಗುಡಿಸುವಳು. ಆಗ ಲಲಿತಮ್ಮನ ಗಲ್ಲಗಳು ಕಂಬನಿಯಿಂದ ತೊಯ್ದು ಹೋಗಿದ್ದುವು.

## ೨

ಶ್ರೀನಾಥನ ಕೈಬರೆಹ ಚೆನ್ನಾಗಿರಲಿಲ್ಲ. ಒಮ್ಮೆ ಒಂದು ತಮಾಷೆ ನಡೆಯಿತು. ಶ್ರೀನಾಥ ತನ್ನದೊಂದು ಕತೆಯನ್ನು ತನ್ನ ಕೈಬರೆಹದಲ್ಲಿಯೆ ಬರೆದು, ಒಂದು ಮಾಸಪತ್ರಿಕೆಗೆ ಕಳುಹಿಸಿದ್ದನು. ಆ ಪತ್ರಿಕೆಯ ಸಂಪಾದಕ ರಿಂದೊಂದು ಓಲೆ ಬಂದಿತು. ಆ ಓಲೆಯ ಸಮಾಚಾರ ಕೇಳಿದರೆ ಬಹುಜನ ರಿಗೆ ತಮಾಷೆಯೆನಿಸಬಹುದು. ಅದರ ಅಭಿಪ್ರಾಯವು ಹೀಗಿದ್ದಿತು:

"ಸ್ವಾಮೀ! ತಮ್ಮ ಕೈಬರೆಹವು ನನ್ನನ್ನು ತುಂಬ ಮೋಸಗೊಳಿ ಸಿತು. ಕಾರ್ಯಾಲಯಕ್ಕೆ ಬಂದಿದ್ದ ಅನೇಕ ಬರೆಹಗಳ ಜೊತೆಯಲ್ಲಿಯೆ ತಮ್ಮ ಕತೆಯೂ ಇದ್ದಿತು. ಎಲ್ಲವನ್ನೂ ಮಗುಚಿ ಮಗುಚಿ ಹಾಕುತ್ತಿರುವಾಗ ತಮ್ಮ ಕತೆಯ ಕೈಬರೆಹವನ್ನು ಕಂಡು, ಇದು ಹುಡುಗರಾರೋ ಬರೆದು

ದಿರಬಹುದೆಂದು ಜುಗುಪ್ಸೆಪಟ್ಟುಕೊಂಡು, ಒಂದು ಕಡೆಗೆ ಎಸೆದು ಬಿಟ್ಟಿದ್ದೆ.
ನಿನ್ನೆಯ ದಿನ ನಮ್ಮ ಸ್ನೇಹಿತರೊಬ್ಬರು ಕಾರ್ಯಾಲಯಕ್ಕೆ ಬಂದಿದ್ದರು. ಅವರ ಕಣ್ಣಿಗೆ ಹೇಗೋ ತಮ್ಮ ಕತೆ ಬಿದ್ದಿತು. ತೆಗೆದುಕೊಂಡು ಅಕ್ಷರಗಳ ವಿಷಯವಾಗಿ ತುಂಬ ನಗೆಯಾಡಿದರು. ಬಳಿಕ "ವಿಷಯವಾದರೂ ಏನಿದೆ ನೋಡೋಣ" ಎಂದು ಹುಡುಗಾಟದ ದನಿಯಲ್ಲಿಯೆ ಓದಲು ತೊಡಗಿದರು. ಓದುತ್ತ ಹೋದಂತೆಲ್ಲ ಕತೆಯ ಭಾಷೆ, ರೀತಿ, ಸನ್ನಿವೇಶ ಇವು ನಮ್ಮಿಬ್ಬರ ಎದೆಯನ್ನೂ ಸೆಳೆದುಕೊಂಡುಬಿಟ್ಟುವು. ನನ್ನ ಸ್ನೇಹಿತರಂತೂ ಕತೆಯನ್ನೋದಿ ಮುಗಿಸಿ, ತಲೆಯಮೇಲಿಟ್ಟುಕೊಂಡು ಕುಣಿದಾಡಿದರು. ಎಳ್ಳಚಿಗುಳೆಯ ಬಣ್ಣಕ್ಕೇ ಬೆದರಿ ಬೇಡವೆಂದು ಬಿಟ್ಟು, ಬಳಿಕ ಅದರ ಸವಿ ಗೊತ್ತಾಗಲು, ಚಿಗುಳೆಕುಟ್ಟಿದ ಒರಳನ್ನೇ ನೆಕ್ಕಲು ತೊಡಗಿದ ಅತ್ತೆಯ ಮನೆಯ ಅಳಿಯನಂತೆಯೇ ನನ್ನ ಹಾಡಾಯಿತು. ತಾವು ದಯೆಯಿಟ್ಟು, ತಿಂಗಳುತಿಂಗಳಿಗೂ ತಪ್ಪದೆ ಒಂದೊಂದು ಕತೆಯನ್ನು ಕಳುಹಿಸಿಕೊಡಬೇಕಾಗಿ ಬೇಡಿಕೊಳ್ಳುತ್ತಿರುವೆನು."

ಈ ಓಲೆ ಬಂದಂದಿನಿಂದ ಶ್ರೀನಾಥನು—ನಾಚಿಕೆಯಿಂದಲೋ ಏನೋ—ತಾನು ಯಾವುದನ್ನು ಬರೆದರೂ ಕರಣಿಕ ರಂಗರಾಯರಿಂದ ಒಳ್ಳೆಯ ಪ್ರತಿ ಬರೆಯಿಸಿ, ಪತ್ರಿಕೆಗಳಿಗೆಕ್ಷ ಕಳುಹಿಸುವನು.

ರಂಗರಾಯರು ತಾಲೂಕುಕಚೇರಿಯಲ್ಲಿ ಕಾರಕೂನರಾಗಿದ್ದರು. ಪೆನ್‌ಶನ್ ಪಡೆದು ಐದಾರು ವರುಷಗಳಾಗಿದ್ದುವು. ಇವರು ಶ್ರೀನಾಥನ ತಂದೆಗೆ ತುಂಬಾ ಬೇಕಾದ ಸ್ನೇಹಿತರು. ಶ್ರೀನಾಥನಲ್ಲಿಯೂ ಹೆಚ್ಚಾಗಿ ಪ್ರೀತಿ ವಿಶ್ವಾಸಗಳನ್ನು ತೋರಿಸುತ್ತಿದ್ದರು. ರಂಗರಾಯರು ಕನ್ನಡ ಅಕ್ಷರಗಳನ್ನು ಬರೆದರೆ ಮುತ್ತಿನ ಸರ ನೋಡಿದಂತಾಗುವುದು. ಬೇರೆ ಕೆಲಸವೇನೂ ಅವರಿಗಿರಲಿಲ್ಲ. ಶ್ರೀನಾಥನು ಬರೆದುದನ್ನೆಲ್ಲ ಪ್ರತಿಮಾಡಿ ಕೊಡುವುದಕ್ಕೆ ಸಂತೋಷದಿಂದ ಅವರು ಒಪ್ಪಿಕೊಂಡಿದ್ದರು. ನಿರಪೇಕ್ಷಬುದ್ಧಿಯಿಂದಲೆ ಈ ಕೆಲಸ ಮಾಡಿಕೊಡುತ್ತಿದ್ದರು.

ಹಗಲು ನಾಲ್ಕು ಗಂಟೆಯ ಸಮಯ; ರಂಗರಾಯರು ತಮ್ಮ ಮನೆಯಲ್ಲಿ ಬರೆಯುತ್ತ ಕುಳಿತಿದ್ದರು. ಶ್ರೀನಾಥನು ಅಲ್ಲಿಗೆ ಬಂದ. ರಾಯರು ಅವನನ್ನು ಆದರದಿಂದ ಬರಮಾಡಿಕೊಂಡರು. ಶ್ರೀನಾಥನ ಮೊಗದಲ್ಲಿ ಆಗ

ನಗೆಯಾಡುತ್ತಿದ್ದರೂ ಚಿಂತೆಯ ಚಿಹ್ನವೂ ನಸು ಒಡೆಮೂಡಿದ್ದಿತು.

ಬರೆಯುವುದನ್ನು ನಿಲ್ಲಿಸಿ, ರಂಗರಾಯರು ಗಂಭೀರಭಾವದಿಂದ ಮಾತನಾಡಿದರು. "ಶ್ರೀನಾಥ! ನಿನ್ನ ಈ 'ಪರದಾಸ್ಯ' ಕಾದಂಬರಿಯ ಪ್ರತಿ ಮಾಡಿ ಆಯಿತು. ಸೊಗಸಾದ ಕತೆ ನೋಡು! ನಾನು ಬರೆಯುತ್ತಿದ್ದೆನಲಾ! ಕೆಲಕೆಲವು ಸಂದರ್ಭಗಳಲ್ಲಿ, ತುಂಬಿ ಬರುತ್ತಿರುವ ಕಂಬನಿಗಳನ್ನು ತಡೆದು ಹಿಡಿಯುವುದಕ್ಕೆ ನನ್ನಿಂದಾಗಲಿಲ್ಲ. ಆ ದಳಪತಿಯಾಡುವ ಮಾತುಗಳನ್ನು ಕೇಳಿಯಂತೂ- ನಾನು ಅರುವತ್ತು ವರುಷದ ಮುದುಕ- ನನ್ನ ನಾಡಿಗಳಲ್ಲಿಯೂ ಹೊಸ ಹರಯದ ಹುರುಪು ಹರಿದಾಡಿದಂತಾಯಿತು. ಸರಿಯಪ್ಪಾ! ಸರಸ್ವತಿ ನಿನಗೆ ಮೆಚ್ಚಿದ್ದಾಳೆ."

ಶ್ರೀನಾಥ ಔದಾಸೀನ್ಯದ ನಗೆಯೊಡನೆ ಹೇಳಿದನು. "ಅಹುದು! ಸರಸ್ವತಿ ಮೆಚ್ಚಿ ವರ ಕೊಟ್ಟಿದ್ದಾಳೆ; ಲಕ್ಷ್ಮೀದೇವಿ ಮಾತ್ರ ಮುನಿದು ನಿಂತಿದ್ದಾಳೆ" ಇದಿಷ್ಟು ಮಾತನಾಡಿ ನಿರಾಶೆಯ ನಿಟ್ಟುಸಿರೊಂದನ್ನು ಬಿಟ್ಟನು.

ರಂಗರಾಯರು ಕಣ್ಣೆತ್ತಿ ಶ್ರೀನಾಥನ ಮುಖವನ್ನು ನೋಡಿದರು. ಎಂದೂ ಇಲ್ಲದ ಔದಾಸೀನ್ಯದ ಕಳೆಯನ್ನು ಆತನ ಮುಖದಲ್ಲಿ ಕಂಡರು; ತಟ್ಟನೆ ಕೇಳಿದರು — "ಏನು ಶ್ರೀನಾಥ! ಮುಖವನ್ನೇತಕ್ಕೆ ಬಾಡಿಸಿ ಬಿಟ್ಟಿದ್ದೀಯೆ?"

ಶ್ರೀನಾಥನು ಮಾತನಾಡಿದನು. "ಬಾಡಿಸಬಾರದೆಂದು ನಾನು ಅದೆಷ್ಟೋ ಹವಣಿಸಿದೆ; ಆದರೆ ಪರಿಸ್ಥಿತಿಯು ನನಗೆ ತಿಳಿಯದಂತೆಯೆ ಮುಖವನ್ನು ಬಾಡಿಸಿ ಬಿಟ್ಟಿದೆ."

"ಏನಾಯಿತೀಗ?"

"ಮತ್ತೇನಾಗುವುದು! ಇದ್ದೇ ಇದೆಯಲ್ಲವೆ- ಹಣದ ತೊಂದರೆ!"

ಅಹುದಪ್ಪಾ! ಅದಕ್ಕೆಂತಲೆ ನಿನಗೆ ಆಗಾಗ ಹೇಳುತ್ತಿರುವೆನು. ಏನಾದರೊಂದು, ಕೊಂಚ ಹಣ ಸಂಪಾದಿಸುವ ಕೆಲಸ ನೀನು ಮೊದಲು ಮಾಡಬೇಕು. ಯಾವಾಗಲೂ ನಿನ್ನ ಬರೆಯುವ ಕೆಲಸ ನಿನಗೆ ಇದ್ದೇ ಇರುವುದಲ್ಲವೇ! ಹಿರಿಯರು ಮಾಡಿಟ್ಟ ಹೊಲಮನೆ ನಿನಗೇನೋ ಇದೆ! ಆದರೆ ಹಾಳು ದಿವಸಗಳು, ಮಳೆ ಬೆಳೆ ಸರಿಯಾಗಿ ಆಗುವುದಿಲ್ಲ. ಬಂದಷ್ಟು ಸಂಸಾರಕ್ಕೆ ಸಾಲುವುದಿಲ್ಲ. ನಿನ್ನ ಈ ಬರೆಯುವ ಉದ್ಯೋಗದಿಂದಂತೂ

ಹಣ ಸಿಕ್ಕುವ ಸಂಭವವೇ ಕಾಣುವುದಿಲ್ಲ. ಕೊಂಚವೆ ದೊರೆಯಲಿ, ತಿಂಗಳು ತಿಂಗಳಿಗೆ ಹಣ ಬರುತ್ತಿದ್ದರೆ ಎಷ್ಟೋ ಅನುಕೂಲವಾಗುವುದು. ಎಲ್ಲಿಯಾದರೂ ಪ್ರಯತ್ನಮಾಡಿ ನೋಡು!"

ಕೆಲಸವೆಂದರೆ ಶ್ರೀನಾಥನಿಗೆ ಬೇಸರ. ರಂಗರಾಯರ ಮಾತುಗಳನ್ನು ಕೇಳಿಯೂ ಕೇಳದವನಂತೆ ಆತ ಸುಮ್ಮನೆ ಕುಳಿತನು. ರಂಗರಾಯರು ಮತ್ತೆ ನುಡಿದರು. "ಏನು? ಆಲೋಚನೆಯೇನು ನಡೆದಿದೆ?"

ಶ್ರೀನಾಥನು ಹೇಳಿದ. "ಈಗ ನನ್ನ ಮನಸ್ಸಿನ ವಿರುದ್ಧವಾದುದೊಂದು ಕೆಲಸ ಮಾಡಬೇಕೆಂದಿರುವೆನು."

"ಅದೇನು?" ರಂಗರಾಯರು ಕೇಳಿದರು.

"ಈ 'ಪರದಾಸ್ಯ' ಕಾದಂಬರಿಯನ್ನು, ಯಾವುದಾದರೊಂದು ಗ್ರಂಥಪ್ರಕಾಶನ ಸಂಸ್ಥೆಗೆ ಕೊಟ್ಟುಬಿಡಬೇಕೆಂದಿರುವೆನು. ಪ್ರತಿಫಲವೇನಾದರೂ ಹೆಚ್ಚಾಗಿ ದೊರೆತರೆ ಎಲ್ಲ ತೊಂದರೆಗಳೂ ನೀಗಿಹೋಗುವುವು." ಶ್ರೀನಾಥ ಹೇಳಿದನು.

ರಂಗರಾಯರು ಮಾತನೇನೂ ಆಡಲಿಲ್ಲ. ನಿರಾಶಾಭಾವದಿಂದ ಮೂಗು ಮುದುಡಿಸಿ 'ತ್ಚ' ಎಂದುಬಿಟ್ಟರು. ಶ್ರೀನಾಥನು ಮತ್ತೆ ಹೇಳಲು ತೊಡಗಿದನು.

"ಪ್ರತಿಫಲ ದೊರೆಯದೆ ಹೋಗಲಿಕ್ಕಿಲ್ಲವೆಂದು ನನ್ನದೇನೋ ತುಂಬಾ ನಂಬುಗೆ. 'ನೂತನ ಗ್ರಂಥಪ್ರಸಾರಕ ಮಂಡಲ' ಎಂಬುದೊಂದು ಸಂಸ್ಥೆ ಬೆಂಗಳೂರಲ್ಲಿದೆ. ಇಂದು ಸಂಜೆಯೊಳಗಾಗಿ ಪ್ರತಿಯನ್ನೆಲ್ಲ ಬರೆದು ಮುಗಿಸಿ ಕೊಟ್ಟರೆ, ನಾಳೆಗೆ ಅದನ್ನು ರಜಿಸ್ಟರು ಮಾಡಿ ಅಲ್ಲಿಗೆ ಕಳುಹಿಸಿಬಿಡುತ್ತೇನೆ. ಗ್ರಂಥವನ್ನು ನೋಡದೆ ತಾವು ಯಾವುದನ್ನೂ ಸ್ಪಷ್ಟವಾಗಿ ಬರೆಯಲಾರೆವೆಂದು ಆ ಸಂಸ್ಥೆಯ ಸಂಚಾಲಕರ ಕಡೆಯಿಂದ ಕಾಗದ ಬಂದಿದೆ."

ನಿರಾಶೆಯ ಸ್ವರದಲ್ಲಿಯೆ ರಂಗರಾಯರು ಮಾತನಾಡಿದರು. "ಆಗಲಿ! ನಾನೇನೋ ಬರೆದು ಅಣಿಮಾಡಿ ಇಟ್ಟಿರುವೆನು. ಏನೋ ಕಳುಹಿಸಿ ನೋಡು! ಪ್ರತಿಫಲ ದೊರೆಯಲಿಕ್ಕಿಲ್ಲವೆಂದು ಭಾವಿಸಿ ಸುಮ್ಮನೆ ಕುಳಿತರೇನಾಗುವುದು? ಹಣ್ಣು ಬೀಳಲಿ ಬೀಳದಿರಲಿ, ಕಲ್ಲನ್ನು ಒಗೆದು ನೋಡಲೇಬೇಕು! ಇದೆಲ್ಲವೂ ಆಯಿತು. ಎಲ್ಲಿಯಾದರೂ ಕೆಲಸಕ್ಕೆ ಸೇರುವುದಕ್ಕೆ ಮಾತ್ರ ಪ್ರಯತ್ನಿಸದೆ ಬಿಡಬೇಡ."

ಶ್ರೀನಾಥನು ಉಪೇಕ್ಷೆಯ ನಗೆ ನಕ್ಕನು. "ಹಾಗಾದರೆ ಈ ಕೆಲಸವನ್ನಷ್ಟು ಮುಗಿಸಿ ಕೊಟ್ಟುಬಿಡಿ" ಎಂದು ನುಡಿದು ಎದ್ದು ಹೊರಟುಬಿಟ್ಟನು. ರಂಗರಾಯರು ಕಣ್ಮರೆಯಾಗುವ ವರೆಗೆ ಆತನನ್ನು ನೋಡುತ್ತ ಕುಳಿತಿದ್ದು ಬಳಿಕ ತಮ್ಮ ಬರೆಯುವ ಕೆಲಸಕ್ಕೆ ತೊಡಗಿದರು.

೩

ಶ್ರೀನಾಥ, ಲಲಿತಮ್ಮ ಮನೆಯಲ್ಲಿ ಮಾತನಾಡುತ್ತ ಕುಳಿತಿರುವರು.

"ಲಲಿತಾ! ಪುಸ್ತಕವನ್ನು ಬೆಂಗಳೂರಿಗೆ ಕಳುಹಿಸಿ ಐದಾರು ದಿವಸಗಳಾದುವು. ಇಷ್ಟರಲ್ಲಿಯೆ ಸಂಸ್ಥೆಯ ಸಂಚಾಲಕರಿಂದ ಮಾರೋಲೆಯು ಬರಬಹುದು. ಬರಿಗೈಯಾಗಲಿಕ್ಕಿಲ್ಲವೆಂದೇನೋ ನನ್ನ ಭರವಸೆ" ಶ್ರೀನಾಥ ನುಡಿದನು.

"ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡಿದಂತಹ ಮಾತಿದು! ಇಲ್ಲಿಯೆ ಎಲ್ಲಿಯಾದರೊಂದು ಚಿಕ್ಕ ಕೆಲಸ ಸಂಪಾದಿಸಿಕೊಂಡರೆ ಆಗದೆ! ಇಷ್ಟು ತೊಂದರೆ ಪಟ್ಟುಕೊಳ್ಳಬೇಕಾಗುವ ಸಂದರ್ಭವೇಕೆ ಒದಗುತ್ತಿದ್ದಿತು! ನನಗೆ ಒಡವೆಯ ಆಶೆಯಿಲ್ಲ, ವಸ್ತ್ರದ ಆಶೆಯಿಲ್ಲ. ನಿಮಗೆ... " ಕಂಠವು ಬಿಗಿದು ಬಂದುದರಿಂದ ಲಲಿತಮ್ಮನ ಮಾತು ಅಷ್ಟಕ್ಕೇ ನಿಂತುಬಿಟ್ಟಿತು. ಕಂಬನಿದುಂಬಿದ ಕಣ್ಣುಗಳಿಂದ ಶ್ರೀನಾಥನ ಕಡೆಗೆ ನೋಡಲು ತೊಡಗಿದಳು.

ಶ್ರೀನಾಥನು ವಿಷಾದದ ನಗೆ ನಗುತ್ತ ಹೇಳಿದನು. "ನೀನು ಹುಚ್ಚಿ; ನಿನಗೇನೂ ತಿಳಿಯದು."

ದುಃಖದಿಂದ ಕಂಪಿಸುತಿರುವ ದನಿಯಿಂದ ಲಲಿತಮ್ಮ ಮಾತನಾಡಿದಳು. "ನಾನೇ ಹುಚ್ಚಿಯೇ! ಐದಾರು ದಿನಗಳಿಂದ ಬೆಳಗಿನಲ್ಲಿ ತಿಂಡಿಯಿಲ್ಲ. ಮಧ್ಯಾಹ್ನದ ಊಟಕ್ಕೆ ಹಾಲಿಲ್ಲ, ಮೊಸರಿಲ್ಲ. ನನ್ನದೇನು ಹಾಳು ಹೊಟ್ಟೆ! ಇದ್ದುದನ್ನು ತಿಂದುಕೊಂಡು ಜೀವಿಸಿರಬಹುದು!.... ತಂದೆಗೆ ಬರೆದು ಏನಾದರೂ ತರಿಸಿಕೊಳ್ಳಬೇಕೆಂದರೆ ಇಷ್ಟರಲ್ಲಿಯೆ ನಾಲ್ಕೈದು ಸಲ ಬರೆದು ಹಣ ತರಿಸಿಕೊಂಡಿದ್ದೇನೆ. ಈಗ ಮತ್ತೆ ಮತ್ತೆ ಬರೆದು ಕೇಳುವುದೆಂದರೆ ನನ್ನ ಜೀವದ ಸುತ್ತು ಬಂದಂತಾಗಿದೆ...."

ಶ್ರೀನಾಥನು ಗಂಭೀರಭಾವದಿಂದಲೆ ಹೇಳಿದ. "ಯಾರಿಗೂ ಬರೆ

ಯುವುದು ಬೇಡ; ಏನನ್ನೂ ತರಿಸುವುದು ಬೇಡ! ನನ್ನ ಆರು ತಿಂಗಳ ತಪಸ್ಸಿನ ಫಲವನ್ನು ಮಾರಲು ಸಿದ್ಧನಾಗಿ ನಿಂತಿದ್ದೇನೆ. ಅದಕ್ಕೆ ಬೆಲೆಯೇನೂ ದೊರೆಯಲಾರದೆ? ಖಂಡಿತವಾಗಿಯೂ ದೊರೆಯುವುದು."

ಹೀಗೆ ಮಾತನಾಡುತ್ತಿರುವಾಗಲೇ ಅಂಚೆಯಾಳು ಬಂದ; ಕಟ್ಟೋಲೆ (ಕವರ್) ಯೊಂದನ್ನೂ ರಜಿಸ್ಟರ್ ಪಾರ್ಸಲ್ಲೊಂದನ್ನೂ ಶ್ರೀನಾಥನ ಕೈಯಲ್ಲಿ ಕೊಟ್ಟು ಕಾಗದದ ಮೇಲೆ ರುಜುಮಾಡಿಸಿಕೊಂಡು ಹೊರಟುಹೋದ. ಶ್ರೀನಾಥ ಕಟ್ಟೋಲೆಯನ್ನು ಬಿಚ್ಚಿ ಆತುರದಿಂದ ಓದಲು ತೊಡಗಿದ. ಲಲಿತಮ್ಮ ಕುತೂಹಲದ ನೋಟದಿಂದ ಆತನನ್ನು ನೋಡುತ್ತ ಕುಳಿತಿದ್ದಳು.

ಕಾಗದವನ್ನು ಓದುವುದಾಯಿತು. ಬೆಳಗಿನ ಚಂದ್ರನಂತೆ ಶ್ರೀನಾಥನ ಮುಖದ ಕಳೆಯು ಕುಂದಿ ಹೋಯಿತು. ಕೈಯಲ್ಲಿ ಹಿಡಿದಿದ್ದ ಕಾಗದವು ಕಳಚಿ ನೆಲಕ್ಕೆ ಬಿದ್ದಿತು. ಶೂನ್ಯದೃಷ್ಟಿಯವನಾಗಿ ನಿಡಿದಾದ ಉಸಿರೊಂದನ್ನು ಹಾಕಿದನು.

ಗಾಬರಿಯ ದನಿಯಿಂದ ಲಲಿತಮ್ಮ ಕೇಳಿದಳು. "ಅದಾರ ಕಾಗದ? ಏನೆಂದು ಬರೆದಿದೆ?"

ಶ್ರೀನಾಥನು ಮಾತನೇನೂ ಆಡದೆ, ಕೆಳಕ್ಕೆ ಬಿದ್ದ ಕಾಗದವನ್ನು ಲಲಿತಮ್ಮನ ಕಡೆಗೆ ಸರಿಸಿಬಿಟ್ಟನು. ಲಲಿತಮ್ಮ ಅದನ್ನು ತೆಗೆದುಕೊಂಡು ಓದಲು ಮೊದಲು ಮಾಡಿದಳು.

ಅದರಲ್ಲಿ ಬರೆದುದರ ಅಭಿಪ್ರಾಯವು ಹೀಗಿದ್ದಿತು.

"ಪ್ರಿಯ ಶ್ರೀನಾಥರಾಯರೆ! ತಮ್ಮ 'ಪರದಾಸ್ಯ' ಕಾದಂಬರಿಯು ಬಲು ಸೊಗಸಾದ ಪುಸ್ತಕವು. ಹೊಸಬಗೆಯುದು. ತಾವು ಪಟ್ಟ ಶ್ರಮಕ್ಕೆ ಬೆಲೆಯೆ ಇಲ್ಲ. ಆದರೆ ಸದ್ಯಕ್ಕೆ ಕೆಲವೊಂದು ಕಾರಣಗಳ ಮೂಲಕ, ನಾವು ಕಾದಂಬರಿಗಳನ್ನು ಪ್ರಕಟಿಸಬಾರದೆಂದು ನಿರ್ಣಯಿಸಿದ್ದೇವೆ. ತಮ್ಮ ಗ್ರಂಥವನ್ನು ಹಾಗೆಯೇ ಮರಳಿ ಕಳುಹಿಸಬೇಕಾಗಿ ಬಂದುದರಿಂದ, ನಮಗೆ ತುಂಬ ವಿಷಾದವೆನಿಸುತ್ತದೆ. ತಮ್ಮ ಕೈಬರೆಹದ ಪ್ರತಿ ತಮಗೆ ತಲ್ಪಿದ ಬಗ್ಗೆ ಕಾಗದ ಬರೆದು ತಿಳುಹಿಸಿ!"

ಕಾಗದವನ್ನೋದಿಕೊಂಡು ಲಲಿತಮ್ಮನೂ ನಿರಾಶೆಯ ಬಿಸಿಯುಸಿರೊಂದನ್ನು ಬಿಟ್ಟಳು. "ಇದೆಲ್ಲ ನನಗೆ ಮೊದಲೇ ಗೊತ್ತು. ನಾನು ಇದೀಗಲೆ ಹೇಳಲಿಲ್ಲವೆ- ಇದು ಮಂಜಿನ ನೀರಿಗೆ ಕೈಯೊಡ್ಡಿದಂತಹ ಮಾತೆಂದು!"

ಎಂದು ನುಡಿದಳು.

ಶ್ರೀನಾಥನು ಮರುನುಡಿಯನ್ನೇನೂ ಹೇಳದೆ, ಬಂದಿದ್ದ ರಜಿಸ್ಟರ್ ಪಾರ್ಸಲನ್ನು, ಬಳಿಯಲ್ಲಿಟ್ಟಿದ್ದ ಪೆಟ್ಟಿಗೆಯ ಮೇಲೆ ಧೊಪ್ಪೆಂದು ಎಸೆದು ಬಿಟ್ಟ. ಅಲ್ಲಿಂದ ಎದ್ದು ಹೊರಕ್ಕೆ ಹೊರಟು ನಡೆದ. ಲಲಿತಮ್ಮ ಅದೆಷ್ಟೊ ವೇಳೆಯ ವರೆಗೆ ಕುಳಿತಲ್ಲಿಯೇ ಕುಳಿತಿದ್ದಳು. ತನ್ನ ಗಂಡನಿಗಾದ ನಿರಾಶೆ ಯಿಂದ ಆಕೆಯ ಎದೆಗುದಿಗೆ ಇನ್ನಿಷ್ಟು ಉಕ್ಕುಬಂದಂತಾಯಿತು. ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು. ಹಣಸಂಪಾದಿಸುವಂತಹ ಯಾವುದಾದರೊಂದು ಕೆಲಸದ ಕಡೆಗೆ, ಶ್ರೀನಾಥನ ಮನಸ್ಸು ಒಲಿಯುವಂತೆ ತಾನೇನು ಉಪಾಯ ಮಾಡಬೇಕೆಂದು ಯೋಚಿಸಿ ಯೋಚಿಸಿ, ಹಣ್ಣಾದಳು.

೪

ಮರುದಿನ ಹಗಲು ಎರಡುಗಂಟೆಯಾಗಿರಬಹುದು. ಶ್ರೀನಾಥ ಮನೆ ಯಲ್ಲಿರಲಿಲ್ಲ. ಲಲಿತಮ್ಮ ನಡುಮನೆಯಲ್ಲಿ ಒಬ್ಬಳೆ ಬಿದ್ದುಕೊಂಡಿದ್ದಾಳೆ. ಏನೇನೊ ಎಣಿಕೆಹಾಕುತ್ತಲಿದ್ದಾಳೆ. ಸುರಿಯುತ್ತಿರುವ ಕಣ್ಣೀರುಗಳನ್ನು ಬೆರಳಿನಿಂದ ಆಗಾಗ ಮಿಡಿಯುತ್ತಿದ್ದಾಳೆ. ರಂಗರಾಯರು ಮನೆಯೊಳಕ್ಕೆ ಬಂದರು. "ಶ್ರೀನಾಥಾ!" ಎಂದು ಕೂಗಿದರು.

ಲಲಿತಮ್ಮ ತಟ್ಟನೆ ಎದ್ದುಕುಳಿತು "ಮನೆಯಲ್ಲಿಲ್ಲ" ಎಂದು ನುಡಿದಳು.

ರಂಗರಾಯರು ಮುಪ್ಪಿನ ಮುದುಕರು. ಅವರ ಕಿರಿಯ ಮಗಳು ಲಲಿತಮ್ಮನಿಗಿಂತ ಒಂದೆರಡು ವರುಷಕ್ಕೆ ಹಿರಿಯಳು. ರಂಗರಾಯರು ಲಲಿತಮ್ಮನನ್ನೂ ಮಗಳಂತೆಯೇ ಭಾವಿಸಿ, ಆಕೆಯೊಡನೆ ಸಲುಗೆಯಿಂದ ನಡೆಯುವರು. ಬೇಕಾದಷ್ಟು ಮಾತುಕತೆಯಾಡುವರು. ಅವರು ಹಾಗೆಯೆ ಮುಂದಕ್ಕೆ ಬಂದು, ಲಲಿತಮ್ಮನನ್ನು ನೋಡಿದರು. ಕಣ್ಣೀರು ಬಿದ್ದುದ ರಿಂದ ಆಕೆಯ ಗಲ್ಲಗಳು ಕಸರಿಕೆಗೊಂಡಿದ್ದುವು. ದನಿಯು ಜಡವಾಗಿದ್ದಿತು. ಮುಖವು ಒಣಗಿ ಹೋದಂತಿದ್ದಿತು. ಬೆದರಿದ ದನಿಯಲ್ಲಿ ರಂಗರಾಯರು ಕೇಳಿದರು.

"ಏನು ಲಲಿತಮ್ಮಾ! ಮೈಯಲ್ಲಿ ಸರಿಯಾಗಿಲ್ಲವೇನು?"

ದುಃಖಾವೇಗವು ಕೊರಳನ್ನು ಬಿಗಿದು ಹಿಡಿಯಿತು. "ಸರಿಯಾಗಿದೆ"

ಎಂದು ಹೇಳುತಿರುವಾಗಲೆ ಲಲಿತಮ್ಮನ ಕಂಬನಿಗಳು ಹೊರಸೂಸಿದುವು.

"ಇದೇನಮ್ಮಾ ಅಳುತ್ತಿದ್ದೀಯೆ?"

ಲಲಿತಮ್ಮ ಮಾತನಾಡದೆ, ಸೆರಗಿನಿಂದ ಮುಖ ಮುಚ್ಚಿಕೊಂಡು ಕುಳಿತಳು. ರಂಗರಾಯರು ಮತ್ತೆ ಕೇಳಿದರು. "ಲಲಿತಮ್ಮಾ, ನನ್ನೊಡನೆ ಮಾತನಾಡುವುದಿಲ್ಲವೆ?"

ಲಲಿತಮ್ಮ ದುಃಖವನ್ನು ನುಂಗಿಕೊಂಡು ಮಾತನಾಡಿದಳು. "ಏನು ಹೇಳಲಿ ದೊಡ್ಡಪ್ಪಾ! ನಮ್ಮ ಮನೆಯ ಸ್ಥಿತಿ ನಿಮಗೆ ಗೊತ್ತಿಲ್ಲವೇ! ಅಂಗಡಿಯ ಸಾಲ ವಿಪರೀತವಾಗಿ ಕುಳಿತಿದೆ. ಹಿಂದಿನ ಹಣ ಕೊಡದುದರಿಂದ ಹಾಲಿ ನವಳು ಹಾಲು ಕೊಡುವುದನ್ನು ನಿಲ್ಲಿಸಿಬಿಟ್ಟಳು. ಮನೆಯಲ್ಲಿ ಇದರ ಕಡೆಗೆ ಲಕ್ಷ್ಯವೇ ಇಲ್ಲ. ಹಗಲು ರಾತ್ರಿ, ಬರೆಯುವ ಧ್ಯಾನವೇ ಧ್ಯಾನ; ಸಂಸಾರದ ಯೋಚನೆಯೇ ಇಲ್ಲ. ಆ ಹಾಳು ಪುಸ್ತಕದಿಂದ ಏನಾದರೂ ಪ್ರತಿಫಲ ದೊರೆತೀತೆಂದು ಹವಣಿಸಿದರೆ, ಅದೂ ಹುಸಿಯಾಗಿ ಹೋಯಿತು. ಈಗ ಎಂಟು ದಿನಗಳಾಯಿತು. ಅವರಿಗೆ ಬೆಳಗಿನಲ್ಲಿ ತಿಂಡಿಯಿಲ್ಲ. ಮಧ್ಯಾಹ್ನ ಒಳ್ಳೆಯ ಊಟವಿಲ್ಲ...." ಮತ್ತೆ ಲಲಿತಮ್ಮನ ದುಃಖ ಉಕ್ಕೇರಿತು.

ರಂಗರಾಯರು ತುಂಬಾ ಮರುಗಿದರು. ಕನಿಕರದ ದನಿಯಲ್ಲಿ ಅವರು ಹೇಳಿದರು. "ಲಲಿತಾ! ಅಳಬೇಡ ಬಿಡು; ದೇವರು ಒಳ್ಳೆಯ ಕಾಲವನ್ನೂ ಒದಗಿಸಬಲ್ಲನು. 'ಎಲ್ಲಿಯಾದರೂ ಒಂದು ಕೆಲಸಕ್ಕೆ ಪ್ರಯತ್ನ ಮಾಡು!' ಎಂದು ನಾನು ಶ್ರೀನಾಥನಿಗೆ ಹೇಳಿಯೇ ಹೇಳುತ್ತಿರುವೆನು. ನನ್ನ ಮಾತನ್ನು ಕಿವಿಗೆ ಹಚ್ಚಿಕೊಳ್ಳುವುದೇ ಇಲ್ಲ. ಇಂತವರ ಬೆನ್ನು ಹತ್ತಿದವರು ಏನು ಬಳೆದುಕೊಳ್ಳಬೇಕು ಮಣ್ಣು! ನೋಡು ಲಲಿತಾ! ನಿನ್ನ ಗಂಡನ ವಿಷಯ ದಲ್ಲಿ ನನಗಂತೂ ಬೇಸರು ಬಂದು ಹೋಯಿತು."

ತನ್ನ ಪಕ್ಷವನ್ನು ಎತ್ತಿಹಿಡಿದು ಮಾತನಾಡಿದುದರಿಂದ, ಲಲಿತಮ್ಮನಿಗೆ ಕೊಂಚ ಸಮಾಧಾನವೆನಿಸಿತು. ಅಳುವನ್ನು ನಿಲ್ಲಿಸಿ, ಆಕೆ ದೈನ್ಯಮಿಶ್ರಿತವಾದ ಧ್ವನಿಯಲ್ಲಿ ಹೇಳಲು ತೊಡಗಿದಳು. "ನೋಡಿ, ನಮ್ಮ ಅಕ್ಕನ ಗಂಡ ಇವ ರಷ್ಟು ಕೂಡ ಓದಿದವನಲ್ಲ. ರೇಶಿಮೆಯ ಅಂಗಡಿಯಲ್ಲಿ ಲೆಕ್ಕಪತ್ರ ಬರೆ ಯುವ ಕೆಲಸ ಮಾಡುವನು; ತಿಂಗಳೊಂದಕ್ಕೆ ನಲವತ್ತು ರೂಪಾಯಿ ಗಳನ್ನು ಸಂಪಾದಿಸುವನು. ದೂರವೇಕೆ! ನಮ್ಮ ಅಣ್ಣ ಎಷ್ಟು ಓದಿರುವ ನೆಂಬುದು ನಿಮಗೆ ಗೊತ್ತಷ್ಟೇ! ರೈಲಿನಲ್ಲಿ ಸೇರಿಕೊಂಡಿದ್ದಾನೆ; ತಿಂಗಳ

ಸಂಬಳವಲ್ಲದೆ ಮೂವತ್ತು ನಲವತ್ತು ರೂಪಾಯಿಗಳಷ್ಟು ಹೆಚ್ಚಿಗೆ ದೊರಕಿಸುತ್ತಾನೆ. ಇವರೂ ಹಾಗೆಯೆ ಎಲ್ಲಿಯಾದರೂ ಕೆಲಸಕ್ಕೆ ಸೇರಿದರೆ ಆಗದೇ? ಹಗಲುರಾತ್ರಿ ಹೀಗೆ ಬರೆಯುತ್ತ ಕೂತರೆ, ಸಂಪಾದನೆಗೆ ದೊಡ್ಡದೊಂದು ಸೊನ್ನೆ. ಸಂಸಾರದ ಯೋಚನೆಯೆ ಬೇಡವೇ ? ''

ರಂಗರಾಯರು ಎಲ್ಲವನ್ನೂ ಕೇಳಿದರು. ನಸುವೇಳೆ ಯೋಚಿಸಿದರು. ಬಳಿಕ ಮಾತನಾಡಿದರು. '' ಲಲಿತಾ ನಿನ್ನ ಗಂಡನಿಗೆ ಕಷ್ಟದ ಕಲ್ಪನೆಯೇ ಇಲ್ಲವೇನೋ! ನೀನು ಇದುವರೆಗೆ ಯಾವುದಕ್ಕೂ ಕೊರತೆ ಬಾರದಂತೆ ವ್ಯವಸ್ಥಿತವಾಗಿ ಸಾಗಿದ್ದೀಯೆ. ಶ್ರೀನಾಥನಿಗೆ ಬಾಳುವೆಯ ಬಿಸಿಯೇ ತಗುಲಲಿಲ್ಲ. ಆತನೆದೆಗೆ ಏನಾದರೂ ಚುರುಕು ಹತ್ತುವಂತೆ ಮಾಡಬೇಕು. ಎಂದರೆ ಆತನಿಗೆ ಇತರರ ದುಃಖದ ಕಲ್ಪನೆಯಾಗುವುದು. ''

ಲಲಿತಮ್ಮ ಹೇಳಿದಳು. '' ಏನು ಮಾಡಬೇಕು ? ನನಗೆ ಯಾವುದೂ ತಿಳಿಯದಾಗಿದೆ. '' ಮಾತಿನೊಡನೆಯೆ ಬೇಸರದ ಉಸಿರು.

ರಂಗರಾಯರು ಒಂದೆರಡು ನಿಮಿಷ ಸುಮ್ಮನೆ ಕುಳಿತಿದ್ದರು. ಬಳಿಕ ಮೆಲ್ಲಗೆ ಹೇಳಲು ತೊಡಗಿದರು. " ತಾನು ಬರೆದ ಬರೆಹಗಳಲ್ಲಿ ಶ್ರೀನಾಥನದು ತುಂಬಾ ಅಭಿಮಾನ. ಹೊಟ್ಟೆಯ ಮಕ್ಕಳಂತೆ ಇವುಗಳನ್ನು ಪ್ರೀತಿಸುವನು. ನಿನ್ನೆ ಬೆಂಗಳೂರಿಂದ ತಿರುಗಿ ಬಂದಿದೆಯಲ್ಲವೆ! ಅದನ್ನು ಬರೆಯುವುದಕ್ಕೆ ಶ್ರೀನಾಥ ಆರೇಳು ತಿಂಗಳು ಶ್ರಮಪಟ್ಟಿದ್ದಾನೆ. ಅದನ್ನು ನೀನು ತೆಗೆದುಕೊಂಡು, ಆತನಿಗೆ ತಿಳಿಯದಂತೆ ಹರಿದು ಸುಟ್ಟುಹಾಕಿ ಬಿಡು. ತನ್ನ ಅದೆಷ್ಟೊ ಶ್ರಮವೆಲ್ಲವೂ ವ್ಯರ್ಥವಾಗಿ ಹಾಳಾಯಿತೆಂದಾದರೂ ಶ್ರೀನಾಥನಿಗೆ ಬರೆಯುವುದರಲ್ಲಿ ವಿರಕ್ತಿಯುಂಟಾಗಬಹುದು. ಇದನ್ನಷ್ಟು ನೀನು ಮಾಡಿಬಿಡು. ಯಾವ ಯೋಚನೆಯನ್ನೂ ಮಾಡಬೇಡ. ''

ರಂಗರಾಯರ ಮಾತು ಲಲಿತಮ್ಮನಿಗೆ ಸರಿಯೆಂದು ತೋರಿತು. '' ಇದೊಂದು ಉಪಾಯವನ್ನೂ ಮಾಡಿ ನೋಡುತ್ತೇನೆ. '' ಎಂದು ಸಮಾಧಾನದಿಂದ ನುಡಿದಳು. ರಂಗರಾಯರು '' ಮತ್ತೊಮ್ಮೆ ಬರುತ್ತೇನೆ '' ಎಂದು ಹೇಳಿ ಹೊರಟು ನಡೆದರು. ಕೂಡಲೆ ಲಲಿತಮ್ಮ ಕಿರುಮನೆಯೊಳಕ್ಕೆ ಹೋದಳು; ಪೆಟ್ಟಿಗೆಯ ಮೇಲೆಯೆ ಇಟ್ಟಿದ್ದ ' ಪರದಾಸ್ಯ'ದ ಹಸ್ತಲಿಖಿತ ಪ್ರತಿಯನ್ನು ತೆಗೆದುಕೊಂಡು, ಅಡಿಗೆಮನೆಗೆ ಬಂದಳು; ಹಿಂದೆ ಮುಂದೆ ಯೋಚಿಸದೆ ಒಂದೊಂದಾಗಿ ಹಾಳೆಗಳನ್ನು ಹರಿದು ಹಾಕಿದಳು;

ಬಳಿಕ ಎಲ್ಲವನ್ನೂ ಸೇರಿಸಿ, ಒಲೆಯಲ್ಲಿಟ್ಟು ಉರಿಯನ್ನಂಟಿಸಿದಳು. ಕೊಂಚ ವೇಳೆಯಲ್ಲಿಯೆ ಪುಸ್ತಕವನ್ನು ಇದ್ದಿತೊ ಇಲ್ಲವೊ ಎಂಬಂತೆ ಮಾಡಿಬಿಟ್ಟಳು. ಆಗ ತಾನೇನೋ ದೊಡ್ಡ ಕೆಲಸವೊಂದನ್ನು ಮಾಡಿದೆನೆಂದು ಲಲಿತಮ್ಮನಿಗೆ ಒಂದು ಬಗೆಯ ಸಮಾಧಾನ.

ತಾನು ಮಾಡಿದುದು ಸರಿಯಾದ ಕೆಲಸವಾಯಿತೇ....? ಎಂದು ಒಂದೊಂದು ಸಲ ಲಲಿತಮ್ಮನಿಗೆ ಎನಿಸುತ್ತಿದ್ದಿತು. ತನ್ನ ಗಂಡ ಇದರಿಂದ ಹಾದಿಗೆ ಹತ್ತುವುದಿದ್ದರೆ, ತಾನು ಮಾಡಿದುದು ಸರಿಯಾದುದೆಂದೇ ಇನ್ನೊಂದು ಸಲ ಎನಿಸುತ್ತಿದ್ದಿತು. ಹೀಗೆನಿಸಿದಾಗಲೆಲ್ಲ ಲಲಿತಮ್ಮನ ಎದೆಯಲ್ಲಿ ಸಮಾಧಾನವಾದಂತಾಗುವುದು. ನಡುಮನೆಯಲ್ಲಿ ಒಬ್ಬಳೇ ಕುಳಿತು ಅವಳು ಭವಿಷ್ಯತ್ಕಾಲದ ಕನಸುಗಳನೇನೇನೊ ಕಾಣುತ್ತಿದ್ದಳು.

ಸುಮಾರು ಐದುಗಂಟೆಯಾಗಿರಬಹುದು. ಶ್ರೀನಾಥನು ಗಡಬಿಡಿಯಿಂದ ನಡೆಯುತ್ತ ಮನೆಯೊಳಕ್ಕೆ ಬಂದ. ಆತನ ಕೈಯಲ್ಲೊಂದು ಕಾಗದ. ಮುಖವು ವಿಕಸಿತವಾಗಿದೆ. ನೇರವಾಗಿ ನಡುಮನೆಗೆ ಬಂದು, ಲಲಿತಮ್ಮನ ಎದುರಿಗೆ ನಿಂತು ಆತುರದಿಂದ ಮಾತನಾಡಿದ.

"ಲಲಿತಾ! ನಿನಗೆ ಸಂತೋಷವಾಗುವಂತಹ ಸಮಾಚಾರವೊಂದಿದೆ."

ಬೇಸರದ ಜಡದನಿಯಲ್ಲಿ ಲಲಿತಮ್ಮ ಕೇಳಿದಳು. "ಅದೇನು ಮತ್ತೆ ನನಗೆ ಸಂತೋಷವಾಗುವಂತಹ ಸಮಾಚಾರ? ತಂದೆಯವರಿಂದ ಕಾಗದವೇನಾದರೂ ಬಂದಿದೆಯೆ?"

"ಬೆಂಗಳೂರಿಂದ ನಿನ್ನೆ ಕಾಗದ ಬಂದಿದ್ದಿತಲ್ಲವೆ! ಈಗ ಮತ್ತೊಂದು ಕಾಗದ ಬಂದಿದೆ."

ಕೊಂಚ ಕುತೂಹಲಗೊಂಡವಳಾಗಿ ಲಲಿತಮ್ಮ ಕೇಳಿದಳು. "ಏನೆಂದು ಬಂದಿದೆ?"

"ಇದು ನೋಡು!" ಎಂದು ಶ್ರೀನಾಥ ಕಾಗದವನ್ನು ಮುಂದೆ ಹಿಡಿದನು. ಲಲಿತಮ್ಮ ತನ್ನ ಕೈಯಲ್ಲಿ ಕಾಗದ ತೆಗೆದುಕೊಂಡು ಓದಲು ತೊಡಗಿದಳು.

"ಪ್ರಿಯ ಶ್ರೀನಾಥರಾಯರೆ!

"ನಿನ್ನೆಯೆ ಬರೆದ ನಮ್ಮ ಕಾಗದವೂ ಕಾದಂಬರಿಯ ಕೈಬರೆಹದ ಪ್ರತಿಯ ಪಾರ್ಸಲ್ಲೂ ತಮಗೆ ತಲ್ಪಿರಬಹುದು. ಈಗ ಮತ್ತೆ ತಮಗೆ ಓಲೆ

ಬರೆಯುವ ಸಂದರ್ಭವೊದಗಿದುದಕ್ಕಾಗಿ ಸಂತೋಷವೆನಿಸುತ್ತಿದೆ. ನಮ್ಮ ಸಂಸ್ಥೆಯಲ್ಲಿದ್ದ ಗ್ರಂಥಪರೀಕ್ಷಕರಾದ ಪಂಡಿತರೆಲ್ಲರೂ ತಮ್ಮ ಕಾದಂಬರಿಯನ್ನು ಬಹಳವಾಗಿ ಪ್ರಶಂಸಿಸುತ್ತಲಿದ್ದಾರೆ. ಅದನ್ನು ಮರಳಿ ಕಳುಹಿಸಿದುದು ಸರಿಯಾದ ಕೆಲಸವಾಗಲಿಲ್ಲವೆಂದು ಅವರ ಅಭಿಪ್ರಾಯ. 'ಅಂತಹ ಪುಸ್ತಕವನ್ನು ನಮ್ಮ ಸಂಸ್ಥೆಯಿಂದ ಹೊರಡಿಸಿದಲ್ಲಿ ಲಾಭ ದೊರೆಯದಿದ್ದರೂ ಚಿಂತೆಯಿಲ್ಲ, ಸಂಸ್ಥೆಯ ಗೌರವವು ಬೆಳೆಯುವುದು' ಎಂದು ಪಂಡಿತರೆಲ್ಲರ ಭಾವನೆ. ಈಗ ಅವರ ಮಾತನ್ನು ಅನುಲಕ್ಷಿಸಿ, ನಮ್ಮ ಸಂಸ್ಥೆಯಿಂದ ನಿಮ್ಮ ಪುಸ್ತಕವನ್ನು ಪ್ರಕಟಗೊಳಿಸಬೇಕೆಂದಿರುವೆವು. ಕೂಡಲೆ ತಮ್ಮ ಗ್ರಂಥದ ಕೈಬರೆಹದ ಪ್ರತಿಯನ್ನು ಕಳುಹಿಸಿಕೊಡುವುದು.

ತಮ್ಮ ಪುಸ್ತಕಕ್ಕೆ ತಕ್ಕ ಪ್ರತಿಫಲ ಕೊಡುವುದೆಂದರೆ ನಮಗೆ ಸಾಮರ್ಥ್ಯ ಸಾಲದು. ಆದರೂ ಸಾವಿರ ರೂಪಾಯಿಗಳ ವರೆಗೆ ಸಂಸ್ಥೆಯು ತಮಗೆ ಸಲ್ಲಿಸಬಹುದು. ತಮ್ಮ ಕೈಬರೆಹದ ಪ್ರತಿ ನಮಗೆ ತಲ್ಪಿದ ದಿನವೆ ಅರ್ಧ ಹಣವನ್ನು—ಎಂದರೆ ಐನೂರು ರೂಪಾಯಿಗಳನ್ನು ತಮ್ಮ ಕಡೆಗೆ ಕಳುಹಿಸುವ ಏರ್ಪಾಡಾಗುವುದು.

ತಮ್ಮ ನಂಬುಗೆಯ

ಕಾರ್ಯದರ್ಶಿ.........."

ಲಲಿತಮ್ಮ ಕಾಗದವನ್ನೋದಿದಳು. ತಾನೀಗ ಆನಂದಪಡಬೇಕೋ ವ್ಯಸನಪಡಬೇಕೋ ಎಂಬುದನ್ನು ತಿಳಿಯದವಳಾದಳು. ದಿಗ್ಭ್ರಮೆಯಾದಂತಾಯಿತು. ಕೈಯನ್ನು ಹಣೆಗೆ ಹಚ್ಚಿಕೊಂಡು, ಸುಮ್ಮನೆ ಕುಳಿತು ಬಿಟ್ಟಳು.

ಈ ಕಾಗದವನ್ನು ನೋಡಿದೊಡನೆಯೆ ಲಲಿತಮ್ಮ ಆನಂದದ ಭರದಿಂದ ಹಾರಾಡಬಹುದೆಂದು ಶ್ರೀನಾಥನು ಎಂದುಕೊಂಡಿದ್ದನು. ಆದರೆ ಅದೆಲ್ಲ ಹೋಗಿ, ಹೀಗೆ ಮುಖ ಬಾಡಿಸಿಕೊಂಡು, ಬಲವಿಲ್ಲದವಳಂತೆ ಕುಳಿತುದನ್ನು ಕಂಡು, ಶ್ರೀನಾಥನಿಗೆ ಬಲು ಕೌತುಕವೆನಿಸಿತು. ಆಶ್ಚರ್ಯದ ದನಿಯಲ್ಲಿಯೆ ಅವನು ಕೇಳಿದನು—"ಇದೇನು ಲಲಿತಾ! ಹೀಗೇಕೆ ಕುಳಿತೆ?"

ಲಲಿತೆಯ ಬಾಯಿಂದ ಮಾತುಗಳೇ ಹೊರಡಲೊಲ್ಲವು. ತುಟಿಗಳು ಅಲುಗತೊಡಗಿದುವು. ಕಣ್ಣೀರು ಗಲ್ಲದಲ್ಲಿ ಹರಿಯಲಾರಂಭಿಸಿತು.

ಶ್ರೀನಾಥನು ನಗೆಯಾಟದ ದನಿಯಲ್ಲಿ ಕೇಳಿದ. "ಇದೇನು! ಕಣ್ಣೀರೇತಕ್ಕೆ? ಈಗಲೂ ನಿನ್ನ ಅಳುವಿಗೆ ಅಪ್ಪಣೆ ಕೊಡುವುದಿಲ್ಲವೇ?"

ಲಲಿತಮ್ಮ ಕಂಪಿಸುತ್ತಿರುವ ಕಂಠದಿಂದ ಪ್ರಯತ್ನಪೂರ್ವಕವಾಗಿ ಮಾತನಾಡಿದಳು. "ನಾನು ಪಾಪಿ! ತಿಳಿಗೇಡಿ! ನನ್ನ ಅಳುವಿಗೆ ಈಗಲೆ ಅಪ್ಪಣೆ ದೊರೆಯುವಂತಿಲ್ಲ."

"ಏಕೆ, ಮತ್ತೇನಾದರೂ ಆಯಿತೇನು?"

"ನಿನ್ನೆ ಬೆಂಗಳೂರಿಂದ ಬಂದಿದ್ದ ಕಾದಂಬರಿಯ ಪ್ರತಿಯನ್ನು ಹರಿದು ಸುಟ್ಟು ಹಾಕಿದೆ" ಎಂದು ಲಲಿತಮ್ಮ ಅಳುತಳುತಲೆ ನುಡಿದಳು.

ಶ್ರೀನಾಥ ಬೆಚ್ಚಿಬಿದ್ದು ಕೇಳಿದ. "ಏನು!"

"ಅಹುದು; ನಿಜವಾಗಿಯೂ ಇದೇ ಕೆಟ್ಟ ಕೈಗಳಿಂದ ಹರಿದು ಸುಟ್ಟು ಬಿಟ್ಟೆ."

ದೈನ್ಯಭಾವದವನಾಗಿ ಶ್ರೀನಾಥ ಕೇಳಿದ. "ಅದೇಕೆ? ಅದನ್ನೇಕೆ ಸುಟ್ಟುಹಾಕಿದೆ?"

ಆಗ ಲಲಿತಮ್ಮ ಮನಸ್ಸಿನಲ್ಲಿಯೆ ರಂಗರಾಯರನ್ನು ಸಾವಿರಾರು ಬಗೆಗಳಿಂದ ಶಪಿಸಿದಳು. ತನ್ನನ್ನು ತಾನೆ ಬೈದುಕೊಂಡು, ಹಣೆಗೆ ಹೊಡೆದು ಕೊಂಡಳು. ತನ್ನ ಜೀವನನಾಟಕದಲ್ಲಿ ರಂಗರಾಯರೆಂದರೆ ಒಬ್ಬ ದುರ್ನಾಯಕ (ವಿಲನ್)ನ ಪಾತ್ರವೆಂದು ಭಾವಿಸಿದಳು. ಪಶ್ಚಾತ್ತಾಪದ ದನಿಯಲ್ಲಿ, ಇದ್ದ ಸಂಗತಿಯನ್ನೆಲ್ಲ ಶ್ರೀನಾಥನಿಗೆ ಹೇಳಿಬಿಟ್ಟಳು.

ಶ್ರೀನಾಥ ಎಲ್ಲವನ್ನೂ ಕೇಳಿದ. ಮರುಳು ಹಿಡಿದಂತೆ ಸುಮ್ಮನೆ ಕುಳಿತ. ಲಲಿತಮ್ಮನೂ ಮಾತನಾಡದೆ ಕುಳಿತಳು. ನಡುನಡುವೆ ಶ್ರೀನಾಥನ ನಿಟ್ಟುಸಿರು; ಲಲಿತಮ್ಮನ ಬಿಕ್ಕಳಿಕೆ. ಕೊಂಚಕಾಲ ಹೀಗೆಯೆ ಕಳೆದು ಹೋಯಿತು ಶ್ರೀನಾಥ ಮಾತನಾಡಲು ತೊಡಗಿದ.

"ರಂಗರಾಯರು ನನಗೆ ಒಳ್ಳೆಯ ಕೆಲಸಕೊಟ್ಟರು. ನನಗೆ ಹಣ ದೊರೆಯುವುದೆಂದರೆ ಅವರಿಗೆ ಹೊಟ್ಟೆಕಿಚ್ಚೋ ಏನೊ! ನನ್ನ ಆರು ತಿಂಗಳ ತಪಸ್ಸು, ನಿಮಿಷದಲ್ಲಿ ಬೂದಿಯಾಗಿ ಬಿಟ್ಟಿತು. ನನಗೆ ಕೀರ್ತಿಯನ್ನು ತಂದು ಕೊಡಬಲ್ಲ ಗ್ರಂಥವದು! ನಾನೇ ಬರೆದ ಮೊದಲಿನ ಕರಡು ಪ್ರತಿಯನ್ನು ಕೂಡ ನಾನು ಕಾದಿಡಲಿಲ್ಲ! ಲಲಿತಾ! ಹಣದ ತೊಂದರೆ ತಪ್ಪಿತೆಂದು ಹಿಗ್ಗಿದ್ದೆ. ನೀನು ನನಗಾಗಿ ಪಡುತ್ತಿದ ದುಃಖವು ದೂರವಾಗಿ

ಹೋಯಿತೆಂದು ಹಾರಯಿಸಿದ್ದೆ. ಈಗ ನನ್ನ ಆ ಹಿಗ್ಗು, ಆ ಹಾರಯ್ಕೆ ಎಲ್ಲವೂ ಹಳವಂಡವಾಗಿ ಹೋದುವು. ಆ ಮುದುಕ ಎಲ್ಲವನ್ನೂ ಹದಗೆಡಿಸಿ ಬಿಟ್ಟಿದ್ದಾನೆ."

ಶ್ರೀನಾಥನ ಈ ಮಾತು ಮುಗಿಯುತ್ತಿರುವಾಗಲೆ ರಂಗರಾಯರು ಅಲ್ಲಿಗೆ ಬಂದರು. ಗಾಬರಿಯ ದನಿಯಿಂದ "ಏನಾಯಿತೀಗ ಶ್ರೀನಾಥಾ!" ಎಂದು ಕೇಳಿದರು. ಶ್ರೀನಾಥನಿಗೆ ರಂಗರಾಯರ ವಿಷಯದಲ್ಲಿ ಜುಗುಪ್ಸೆಯುಂಟಾಗಿದ್ದಿತು. ಮುಖವನ್ನೆತ್ತಲಿಲ್ಲ; ಅವರನ್ನು ನೋಡಲಿಲ್ಲ. ಲಲಿತಮ್ಮನು ಮಾತ್ರ ಕೆಂಗಣ್ಣುಗಳಿಂದ ರಂಗರಾಯರ ಕಡೆಗೊಮ್ಮೆ ನೋಡಿದಳು. ಮತ್ತೆ ಮುಖ ತಗ್ಗಿಸಿ ಕುಳಿತಳು.

"ಏನಯ್ಯಾ ಶ್ರೀನಾಥ! ಇಬ್ಬರೂ ಹೀಗೇಕೆ ಕುಳಿತಿದ್ದೀರಿ? ಮುದುಕನಾರು? ಹದಗೆಡಿಸಿದುದೇನು?" ರಂಗರಾಯರು ಮತ್ತೆ ಕೇಳಿದರು.

ಶ್ರೀನಾಥ ಕಂಬನಿ ಬೆರೆತ ಕಣ್ಣುಗಳಿಂದ ರಂಗರಾಯರ ಕಡೆಗೊಮ್ಮೆ ನೋಡಿದ; ಬಳಿಯಲ್ಲಿ ಬಿದ್ದಿದ್ದ ಕಾಗದದ ಕಡೆಗೊಮ್ಮೆ ನೋಡಿದ. ಮತ್ತೆ ಮೊದಲಿನಂತೆಯೆ ಕುಳಿತ.

ರಂಗರಾಯರು ಇವನ ಭಾವವನ್ನರಿತು ಮುಂದೆ ಬಂದು, ಕೆಳಕ್ಕೆ ಬಿದ್ದಿದ್ದ ಕಾಗದವನ್ನು ಕೈಗೆ ತೆಗೆದುಕೊಂಡರು. ಎಲ್ಲವನ್ನೂ ಓದಿದರು. ಮುಗುಳುನಗೆಯ ಮೊಗದಿಂದ ಗಂಡಹೆಂಡಿರನ್ನು ನೋಡಲು ತೊಡಗಿದರು. ರಂಗರಾಯರ ಈ ಮುಗುಳುನಗೆಯು ಲಲಿತಮ್ಮನ ಕರುಳನ್ನು ಸೂಜಿಯಾಗಿ ಚುಚ್ಚಿತು. "ಅಯ್ಯೊ" ಎಂದು ಕಿರಿಚಿಕೊಳ್ಳುವಂತೆ ಅವಳಿಗಾಯಿತು. ಮತ್ತೆ ಗಟ್ಟಿಮನಸ್ಸು ಮಾಡಿ ಸುಮ್ಮನೆ ಕುಳಿತಳು.

ರಂಗರಾಯರು ಲಲಿತಮ್ಮನನ್ನು ನೋಡುತ್ತ, ನಗೆಯಾಟದ ಸಲುಗೆಯ ಮಾತಿನಲ್ಲಿ ಹೇಳಿದರು. "ಲಲಿತಮ್ಮಾ! ನಿನಗಿಂದು ಮಂಜಿನ ನೀರೇ ಮಳೆಯ ನೀರಾಯಿತಲ್ಲಾ!"

ಲಲಿತಮ್ಮನಿಗೀಗ ತಡೆಯುವುದಾಗಲಿಲ್ಲ. ಸಿಡಿನುಡಿಗಳಿಂದ ಹೇಳಿದಳು. "ಮಂಜಿನ ನೀರೇನೋ ಮಳೆಯ ನೀರು ಆಯಿತು. ಆದರೆ ನನ್ನನ್ನು ಕಾಡುವ ಕಾಟ ನನಗದನ್ನು ದಕ್ಕಗೊಡಲಿಲ್ಲ." ಲಲಿತಮ್ಮನಿಗೆ ಅಳುವು ಒತ್ತರಿಸಿ ಬಂದಿತು.

ಲಲಿತಮ್ಮ ಅಳುತ್ತಿದ್ದ ಹಾಗೆಲ್ಲ ರಂಗರಾಯರ ನಗೆ ಹೆಚ್ಚಾಗುತ್ತಿ

ದ್ದಿತು. ಶ್ರೀನಾಥ ಕಿಡಿಗಣ್ಣಿನಿಂದ ರಂಗರಾಯರನ್ನು ನೋಡಿದ. ಬಿರು ಸಾದ ಮಾತಿನಿಂದ ಹೇಳಿದ.

" ರಾಯರೇ ! ಈ ನಿಮ್ಮ ಕೆಟ್ಟ ನಗೆಮೋರೆ ನನಗೆ ಕೋಪವನ್ನುಂಟು ಮಾಡುತ್ತಿದೆ. ದಯೆಮಾಡಿ ಈಗ ನೀವು ಹೊರಟು ಹೋಗಿ ಬಿಡಿ!"

ರಂಗರಾಯರು ಶ್ರೀನಾಥನ ಸಿಡುಕು ಮಾತು ಕೇಳಿ, ಇನ್ನಿಷ್ಟು ನಕ್ಕು ಬಿಟ್ಟರು; ಕೂಡಲೆ ಹೇಳಿದರು. " ಶ್ರೀನಾಥಾ! ನಿನ್ನ ಮಾತಿನಂತೆ ನಾನೇನೊ ಹೊರಟು ಹೋಗುತ್ತೇನೆ; ಆದರೆ ಹೋಗುವ ಮೊದಲು ನಿನಗೊಂದು ಮಾತನ್ನು ಹೇಳಿ ಹೋಗಬೇಕಾಗಿದೆ. "

ಶ್ರೀನಾಥನು ಬಿರುಸಾಗಿಯೆ ಕೇಳಿದ. " ಅದೇನು ಮಾತು! ಹೇಳಿ! ಬೇಗನೆ ಹೊರಟುಬಿಡಿ ! "

" ನಿನ್ನ ' ಪರದಾಸ್ಯ ' ಕಾದಂಬರಿಯ ಎರಡು ಪ್ರತಿಗಳನ್ನು ಮಾಡಿದ್ದೇನೆ. "

ಶ್ರೀನಾಥನು ಆತುರನಾಗಿ ಕೇಳಿದ " ಏನು.... ? "

" ಲಲಿತಮ್ಮನು ನನ್ನ ಹೇಳಿಕೆಯಂತೆ ನಿಮ್ಮ ಮನೆಯಲ್ಲಿದ್ದ ಒಂದು ಪ್ರತಿಯನ್ನು ಹರಿದು ಸುಟ್ಟು ಹಾಕಿದುದೇನೋ ಸರಿ ! ಇನ್ನೊಂದು ಪ್ರತಿ ನಮ್ಮ ಮನೆಯಲ್ಲಿದೆ. " ರಂಗರಾಯರು ಹೇಳಿದರು.

ಶ್ರೀನಾಥನ ಕಿವಿಗೆ ಈ ಮಾತು ಬಿದ್ದಿತೊ ಇಲ್ಲವೊ! ದಿಗ್ಗನೆ ಎದ್ದು ಬಂದು ರಂಗರಾಯರ ಕೊರಳಿಗೆ ತಕ್ಕೆಬಿದ್ದ; ಕಂಬನಿಗಳಿಂದ ರಂಗರಾಯರ ಎದೆಯನ್ನು ತೋಯಿಸಿದ. ಲಲಿತಮ್ಮ ಆನಂದಪರವಶಳಾಗಿ, ಕೃತಜ್ಞತೆಯು ತುಂಬಿದ ಕಣ್ಣುಗಳಿಂದ ರಂಗರಾಯರ ಕಡೆಗೆ ನೋಡಲು ತೊಡಗಿದಳು.

ಅಕ್ಟೋಬರ್ ೧೯೩೦

# ಬಾಡಿಬಿದ್ದ ಹೂ

## ೧. ಮೊನ್ನೆ

ಮೊತ್ತಮೊದಲು ನಾನು ಅವಳನ್ನು ನೋಡಿದುದು ಮೊನ್ನೆಯ ಬೆಳಗಿನಲ್ಲಿ. ಹನುಮನ ಗುಡಿಯ ಮುಂದಣ ಅರಳಿಮರದಡಿಯ ಕಟ್ಟೆಯ ಮೇಲೆ ಕುಳಿತಿದ್ದಳು. ಅಂದಿನ ಅವಳ ಕುಳಿತ ಬಗೆಯು ಯಾವುದೋ ಒಂದು ಎದೆಯ ಕೊರಗನ್ನು ಸೂಚಿಸುವಂತಹದು. ಎಡದೊಡೆಯ ಮೇಲೆ ಎಡದ ಮೊಳಕೈಯ ಭಾರ; ಮೇಲಿದ್ದ ಅಂಗೈ ಎಡದ ಗಲ್ಲಕ್ಕೆ ಆಧಾರ. ಕಣ್ಣುಗಳೆರಡೂ ಅರೆಯರೆಯಾಗಿ ತೆರೆದಿವೆ; ಎವೆಗಳು ಉಲುಕದೆ ಇವೆ. ವಯಸ್ಸೇನು ಹೆಚ್ಚಾಗಿರಲಾರದು. ಇಪ್ಪತ್ತರ ಒಳಗೆ, ಹೊರಗೆ ಇರಬಹುದು. ತುಂಬುಜವ್ವನೆ; ನೋಡಿದವರ ಕಣ್ಣುಮನಗಳನ್ನು ಸೆಳೆಯುವಂತಹ ಚೆಲುವಿಕೆಯವಳದು. ಉಟ್ಟ ತೊಟ್ಟ ಬಟ್ಟೆಗಳು ಬೆಲೆಬಾಳುವಂತಹವು; ಆದರೆ ತೀರ ಮಾಸಿಹೋಗಿದ್ದವು. ಮೈಮೇಲೆ ಒಡವೆಗಳಾವುವೂ ತೋರುತ್ತಿರಲಿಲ್ಲ. ತಲೆಯ ಮುಂಗುರುಳ ಕಪ್ಪೆಲ್ಲವೂ ಹುಡಿಯಲ್ಲಿ ಅಡಗಿಬಿಟ್ಟದ್ದಿತು. ಆದರೇನು! ಇದಾವುದರಿಂದಲೂ ಮರೆಗೊಳ್ಳದಂತಹದು ಆಕೆಯ ಚೆಲುವಿಕೆ. ಆ ಕೋರೆಹುಬ್ಬುಗಳ ಕೆಳಗಿನ ಮೀನಿನಾಕಾರದ ಕಣ್ಣುಗಳ ಸ್ಥಿರವಾದ ನೋಟ, ನಡುಮೊಗದಲ್ಲಿರುವ ನಿಡುಮೂಗಿನ ಬೆಡಗು, ಮೆಟ್ಟಲು ಮೆಟ್ಟಲಾಗಿ–ಸುಳಿಗುರುಳು ಬಳಸಿದ–ಹವಣದ ಹಣೆ, ಒಣಗಿ ಕಂದಿ ಹೋಗಿದ್ದರೂ ಅಂದವಾಗಿ ಕಾಣುತ್ತಿರುವ ಚೆಂದುಟಿಯ ಬಾಯಿ, ಬೆನ್ನತುಂಬ ಎಸಳೆಸಳಾಗಿ ಕೆದರಿಬಿದ್ದಿದ್ದ ನೀಳವಾದ ತಲೆಗೂದಲು, ಆಳತೆಯ ನಿಲುವಿಕೆ, ನಿಲುವಿಕೆಗೆ ಸರಿಯಾದ ಅವಯವಗಳ ಪಡಿಕಟ್ಟು, ಇವೆಲ್ಲ ಎಂತೆಂತವರ ಕಣ್ಣೆದೆಗಳನ್ನೂ ಸೆಳೆದುಕೊಂಡು, ನಸುವೇಳೆ ನಿಂತು ನೋಡಿ ಹೋಗಲು ಹಚ್ಚುವಂತಹವು.

ದಾರಿಯಲ್ಲಿ ಹೋಗಿಬರುವ ಹೆಂಗಸರು–ಗಂಡಸರು ಎಲ್ಲರೂ ಅವಳನ್ನು ನೋಡುವರು. 'ಇವಳಾರು, ಹೊಸಬಳು!' ಎಂದು ಬೆರಗುಗೊಂಡು ನಿಲ್ಲುವರು. ಅವಳನ್ನು ಬಗೆಬಗೆಯಾಗಿ ಮಾತನಾಡಿಸುವರು. ಯಾರು ಮಾತನಾಡಿಸಿದರೂ ಮರುಮಾತಿಲ್ಲ; ಮಾತನಾಡಿಸಿ, ನೋಡಿ ಬೇಸತ್ತವರು ಕೌತುಕದ ನೋಟದಿಂದ ಆಕೆಯನ್ನು ಮರಳಿ ಮರಳಿ ನೋಡುತ್ತ ತಮ್ಮ

ತಮ್ಮ ಕೆಲಸಗಳಿಗೆ ಸಾಗಿಬಿಡುವರು. ಅವಳು ಕಲ್ಲುಗೊಂಬೆಯಂತೆ ಕುಳಿತ ವಳು ಕುಳಿತುಕೊಂಡೇ ಇದ್ದಳು. "ಹುಚ್ಚಿಯೇನೋ ಪಾಪ!" ಎಂದು ಕೆಲವರು ಮಾತನಾಡುತ್ತಿದ್ದರು. "ಎಷ್ಟು ಚೆಲುವೆಯಾಗಿದ್ದಾಳೆ, ಹುಚ್ಚಿ ಗೇತಕ್ಕೆ ಇಷ್ಟೊಂದು ಚೆಲುವನ್ನು ಕೊಟ್ಟಿದ್ದಾನೋ ದೇವರು" ಎಂದು ಕೆಲವರು ಆಡಿಕೊಳ್ಳುತ್ತಿದ್ದರು. ತುಂಬಿದ ಕೊಡಗಳನ್ನು ಹೊತ್ತವರು ತಲೆಯ ಭಾರವನ್ನು ಕೂಡ ಗಣಿಸದೆ, ನಿಂತುನಿಂತು ನೋಡಿ ಹೋಗುತ್ತಿದ್ದರು. ಹುಡುಗರಿಗೆ ಇನ್ನೇನು ಕೆಲಸ; ಅವಳನ್ನು ಬಳಸಿ ಹಿಂಡುಹಿಂಡಾಗಿ ನಿಂತು ಕೊಂಡಿದ್ದರು. ತಮ್ಮ ಹುಡುಗತನಕ್ಕೆ ಸರಿಯಾಗಿ ಅವಳನ್ನು ಏನೇನೋ ಕೇಳುತ್ತಿರುವರು. ಮರುನುಡಿಯೇ ಇಲ್ಲದಿರಲು ನಿರಾಶರಾಗುವರು.

ನಾನು ಅಲ್ಲಿದ್ದಾಗ ಚಿಕ್ಕ ಹುಡುಗಿಯೊಬ್ಬಳು ತನ್ನ ತೊದಲುತೊದ ಲಾದ ನುಡಿಗಳಿಂದ ಕೇಳಿದಳು. "ನೀನು ಯಾಲವ್ಮಾ?". ಕದಲದೆ ಕುಳಿ ತಿದ್ದ ಆಕೆಯು ತನ್ನ ಕಣ್ಣುಗಳನ್ನರಳಿಸಿ ಹುಡುಗಿಯ ಕಡೆಗೆ ನೋಡಿದಳು ಮಾತ್ರ; ಮಾತನೇನೂ ಆಡಲಿಲ್ಲ. ಕೇಳಿದ ಹುಡುಗಿ "ಓ! ನನ್ನ ಕದೆ ನೋದಿದಿಲು!" ಎಂದು ಕೂಗಿ ಕೂಗಿ ಕುಣಿದಳು. ಇನ್ನೊಬ್ಬ ಹುಡು ಗನು ಕೇಳಿದ. "ನಿಮ್ಮ ಊರು ಯಾವುದಮ್ಮಾ?" ಇದಕ್ಕೂ ಉತ್ತರ ವಿಲ್ಲ. ಮುಗುಳುನಗೆಯ ಮೊಗದಿಂದ ಹುಡುಗನನ್ನು ನೋಡಿದಳು; ಕೂಡಲೆ ನಿಟ್ಟುಸಿರೊಂದನ್ನು ಬಿಟ್ಟು, ಮೊದಲಿನಂತೆ ಗಂಭೀರಭಾವದಿಂದ ಕುಳಿತುಕೊಂಡಳು. "ಓ! ಹುಚ್ಚಿ ನನ್ನನ್ನು ನೋಡಿ ನಕ್ಕಿತು!" ಎಂದು ಹುಡುಗ ಹಿಗ್ಗಿನಿಂದ ಕೂಗಿದ. ಎಲ್ಲರಂತೆ ನಾನಾದರೂ ಆಕೆಯನ್ನು ಮಾತ ನಾಡಿಸಲು ಹವಣಿಸಿದೆ. ಮೊಗವೆತ್ತಲಿಲ್ಲ. ಆದೆಷ್ಟು ಮಾತನಾಡಿಸಿದರೂ ನನಗೆ ನಿರಾಶೆಯ ಫಲವೇ ದೊರೆಯಿತು. "ಮೂಕಿ ಇರಬಹುದೇ ಇವಳು!" ಎಂದುಕೊಂಡೆ. ಕಿತ್ತಲಾಗದ ಅಡಿಗಳನ್ನು—ಉತ್ಸಾಹದಿಂದ- ಎತ್ತಿತ್ತಿ ಹಾಕುತ್ತ ಅಡಿಗಡಿಗೆ ಅವಳನ್ನು ಹೊರಳಿ ಹೊರಳಿ ನೋಡುತ್ತ ಮನೆಗೆ ಬಂದೆನು. ಅಂದಿನ ಹಗಲೆಲ್ಲವೂ ನನಗೆ ಅವಳ ಯೋಚನೆಯೇ.

* * * *

ಇಳಿಹೊತ್ತಾಯಿತು. ಆಕೆಯನ್ನು ಮತ್ತೆ ನೋಡಬೇಕೆಂದು ಮನ ದಾಶೆ; ಮನೆಬಿಟ್ಟು ಹೊರಟೆ, ಹನುಮನ ಗುಡಿಗೆ ಹೋದೆ. ಆಗ ಅವಳು ಮೊದಲು ನೋಡಿದಾಗ ಕುಳಿತಿದ್ದೆಡೆಯಲ್ಲಿಯೇ ಮಲಗಿಕೊಂಡಿದ್ದಳು. ಬಳಿ

ಯಲ್ಲಿ ಹುಡುಗರ ನೆರವಿಯಂತೂ ಇದ್ದೇ ಇದ್ದಿತು. ಕಣ್ಣುಗಳನ್ನು ಪೂರ್ಣ ವಾಗಿ ಮುಚ್ಚಿದ್ದಳು. ಒತ್ತರದಿಂದ ಉಸಿರಾಡಿಸುತ್ತಿದ್ದಳು. ನಿದ್ದೆ ಮಾಡು ತ್ತಿರುವಂತೆ ಕಂಡುಬರುತ್ತಿದ್ದಿತು.

ಬಳೆಗಾರ ಚೆನ್ನಮ್ಮನು ಬಳೆಹೊತ್ತುಕೊಂಡು ಬೀದಿಗುಂಟ ಬಂದಳು. ಗುಡಿಯ ಬದಿಯಲ್ಲಿಯೆ ನಿಂತು "ಬಳೆಯಮ್ಮಾ....ಬಳೆ!" ಎಂದು ಗಟ್ಟಿ ಯಾಗಿ ಕೂಗಿದಳು. ಈ ಕೂಗನ್ನು ಕೇಳಿ, ಮಲಗಿದ್ದ ಆಕೆ ತಟ್ಟನೆ ಮೇಲ ಕ್ಕೆದ್ದು ಕುಳಿತು, "ಬಾರಮ್ಮಾ ಇಲ್ಲಿ!" ಎಂದು ಬಳೆಗಾರತಿಯನ್ನು ಕರೆ ದಳು. ನನಗೆ ಆಚ್ಚರಿಯಾಯಿತು. "ಇವಳನ್ನು ಮೂಕಿ ಇರಬಹುದು ಎಂದುಕೊಂಡಿದ್ದೆನಲ್ಲ!" ಎಂದು ನನ್ನೊಳಗೆ ನಾನೇ ಆಡಿಕೊಂಡೆನು. ಇನ್ನಿಷ್ಟು ಕುತೂಹಲಗೊಂಡವನಾಗಿ ಆಕೆಯನ್ನು ನೋಡುತ್ತ ನಿಂತೆನು. 'ಇವಳು ಹುಚ್ಚಿ' ಎಂದು ಬಳೆಗಾರತಿಯ ಭಾವನೆ; ಏನೋ ಕೊಂಚ ನಗೆ ಯಾಟವಾಡೋಣ!–ಎಂದೋ ಏನೋ ಬಳೆಗಾರತಿಯು ಅಲ್ಲಿಗೆ ಬಂದಳು; ಕಿರುನಗೆ ನಗುತ್ತ ಕೇಳಿದಳು. "ಏತಕ್ಕೆ ಕರೆದೆಯಮ್ಮಾ! ಬಳೆ ಬೇಕೇನು ನಿನಗೆ?" ಹುಚ್ಚಿ ಗಂಭೀರಭಾವದಿಂದ ಹೇಳಿದಳು. "ಅಹುದಮ್ಮಾ! ನೋಡೋಣ ನಿನ್ನ ಬಳೆ." ಬಳೆಗಾರತಿಗೆ ತಮಾಷೆಯೆನಿಸಿತು. ಬಗೆಬಗೆಯ ಬಳೆಗಳನ್ನು ಒಂದೊಂದಾಗಿ ತೋರಿಸಿದಳು. ಹುಚ್ಚಿ ನೆಟ್ಟನೋಟದಿಂದ ಎಲ್ಲವನ್ನೂ ನೋಡಿದಳು. ಮೊಗದ ಬಗೆಯು ಯಾವ ತೆರದ ಮಾರ್ಪಾ ಡನ್ನೂ ಹೊಂದಲಿಲ್ಲವಾಗ. ಒಂದೇ ಒಂದು ಮಾತನಾಡಿದಳು: "ಒಳ್ಳೆಯ ಬಳೆಗಳಿವೆ."

ಬಳೆಗಾರತಿ ನಗೆಯಾಟದ ದನಿಯಲ್ಲಿಯೇ ಕೇಳಿದಳು: "ಬೇಕೇನು ನಿನಗೆ ಒಳ್ಳೆಯ ಬಳೆ?" ಮೊದಲಿದ್ದ ಗಂಭೀರಭಾವದಿಂದಲೇ ಆಕೆ ಮಾತ ನಾಡಿದಳು: "ಅಹುದು ಬೇಕು! ಇಂತಹ ಬಳೆಗಳೆಂದರೆ ನನಗೆ ತುಂಬ ಇಷ್ಟ; ಈಗ ಅವರು ಬರುವರು. ದುಡ್ಡು ಕೇಳಿ ತೆಗೆದುಕೊಳ್ಳುತ್ತೇನೆ. ನಾನು ದುಡ್ಡು ಕೇಳಿದರೆ, ಅವರು ಇಲ್ಲವೆಂದು ಎಂದೆಂದೂ ಹೇಳರು. ನೀನು ಇನ್ನೊಂದು ಸಲ ಬಾ! ಬಳೆ ತೆಗೆದುಕೊಳ್ಳುತ್ತೇನೆ."

ಬಳೆಗಾರತಿಗೆ ನಗೆ ಬಂದುಬಿಟ್ಟಿತು. ಹುಚ್ಚಿಯ ಹುಚ್ಚುಮಾತು ಗಳೆಂದು ನಕ್ಕುಬಿಟ್ಟು ಮುಂದೆ ನಡೆದಳು. ಅಲ್ಲಿದ್ದವರಿಗೂ ತಮಾಷೆಯಾಗಿ ತೋರಿತು. ಎಲ್ಲರೂ ನಕ್ಕರು. ಅವಳಾಡಿದ ಮಾತು, ಮಾತನಾಡುತ್ತಿರು

ವಾಗಿನ ಮುಖಭಾವ ಇದೆಲ್ಲವನ್ನು ನೋಡಿ ನನಗೆ ಯಾವುದೂ ತಿಳಿಯ
ದಂತಾಯಿತು. "ಇವಳು ನಿಜವಾಗಿಯೂ ಹುಚ್ಚಿ ಇರಬಹುದೇನು?" ಎಂದ
ಭಾವಿಸಿದೆನು. ಅದೇತಕ್ಕೋ ಕಾಣೆ, ಆ ಹುಚ್ಚಿಯ ವಿಷಯವಾಗಿ ನನ
ತುಂಬ ಮರುಕವೆನಿಸಿತು. ಬೆಳಗಿನಿಂದಲೂ ಆಕೆ ಬಾಯಿ ನೀರು ಕೂ
ಹಾಕಿರಲಿಲ್ಲವಂತೆ. ಯಾರು ಏನು ಕೊಡಲು ಬಂದರೂ ಅದನ್ನು ಮುಟ್
ಲಿಲ್ಲವಂತೆ. ಹಾಗೆಯೇ ನಾನು ಮನೆಗೆ ಬಂದು ಹುಚ್ಚಿಯ ವಿಚಾರವನ್ನೆ
ತಾಯಿಗೆ ತಿಳುಹಿಸಿದೆ. ಕೂಡಲೆ ನಮ್ಮ ತಾಯಿ ಏನೇನೊ ತಿಂಡಿಗಳನ್
ತೆಗೆದುಕೊಂಡು, ಹುಚ್ಚಿಗೆ ಕೊಟ್ಟು ಬರುವೆನೆಂದು ನಡೆದಳು. ಮರ
ಮನೆಗೆ ಬಂದಾಗ ತಾಯಿ ನನಗೆ ಹೇಳಿದಳು. "ಎಂತಹದಪ್ಪಾ ಆ ಹುಚ್ಚಿ
ನಾನು ತಿಂಡಿಯನ್ನು ತೆಗೆದುಕೊಂಡು ಹೋಗಿದ್ದೆನಲ್ಲವೇ! ತಿನ್ನು ತಿನ್
ಎಂದು ಅದೆಷ್ಟೋ ಒತ್ತಾಯ ಪಡಿಸಿದೆ. ಮೊದಮೊದಲು ನನ್ನೊಡನೆ ಮಾ
ನಾಡಲೆ ಇಲ್ಲ. ಕೊನೆಗೆ, ಅವರು ಬರುತ್ತಾರೆ. ಬಂದಬಳಿಕ ತಿನ್ನುತ್ತೇನೆ
ಎಂದಳು. ಎಲ್ಲವನ್ನೂ ಅಲ್ಲಿಯೇ ಇಟ್ಟು ಬಂದೆ."

ಕೇಳಿ ನನ್ನ ಆಶ್ಚರ್ಯಕ್ಕೆ ಇನ್ನಿಷ್ಟು ಉಕ್ಕುಬಂದಂತಾಯಿತು
ಅಂದು ರಾತ್ರಿ ನಾನು ಊಟವನ್ನು ಮಾಡಿದೆನೇನೋ ಸರಿ! ಏನೇನು ಉಂ
ನೆಂಬುದು ನನ್ನದು ನನಗೇ ಗೊತ್ತಿಲ್ಲ. ಎಚ್ಚತ್ತಿರುವಾಗಲೆಲ್ಲ ಹುಚ್ಚಿಯ
ಧ್ಯಾನವೇ ಧ್ಯಾನ. ನಿದ್ದೆ ಹೋದಾಗಲೆಲ್ಲ ಹುಚ್ಚಿಯ ಪಾತ್ರವೇ ಪ್ರಧಾ
ವಾಗಿದ್ದ ಕನಸಿನ ನೋಟಗಳು.

## ೨. ನಿನ್ನೆ

ನಿತ್ಯದಂತೆ ನಿನ್ನೆ ನನಗೆ ನಸುಕಿನಲ್ಲಿ ಬೇಗನೆ ಏಳುವುದಕ್ಕಾಗಲಿಲ್ಲ
ಎಂಟು ಗಂಟೆಗೆ ಹಾಸಿಗೆಯನ್ನು ಬಿಟ್ಟೆನು. ಕೈಯಲ್ಲಿ ತಂಬಿಗೆ ತೆಗೆದುಕೊಂಡ
ನದಿಗೆ ಹೋಗಬೇಕೆಂದು ಹೊರಟೆನು. ಆ ಹುಚ್ಚಿ ನಾಡಗೌಡರ ಮನೆಯ
ಮುಂದಣ ಜಗುಲಿಯ ಮೇಲೆ ಕುಳಿತಿದ್ದಳು. ಕಾಲುಗಳನ್ನು ಜಗುಲಿಯಿಂ
ಕೆಳಕ್ಕೆ ಇಳಿಯಬಿಟ್ಟು ಮುಂದಕ್ಕೆ ಹಿಂದಕ್ಕೆ ಅಲ್ಲಾಡಿಸುತ್ತಿದ್ದಳು. ಕೈಗ
ರಡೂ ಒಂದರಮೇಲೊಂದಾಗಿ ತೊಡೆಯಲ್ಲಿ ಬಿದ್ದುಕೊಂಡಿದ್ದುವು. ತೆರೆ
ಕಣ್ಣುಗಳ ನೋಟವು ಯಾವುದರಲ್ಲಿ ನೆಲಸಿ ನಿಂತಿದ್ದಿತೋ ತಿಳಿಯದ
ಬಾಯಿಂದ ಕಿರುದನಿಯಲ್ಲಿ "ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ| ಕಪ

ನಾಟಕ ಸೂತ್ರಧಾರಿ ನೀನೆ" ಎಂಬ ಪಲ್ಲವಿಯನ್ನು ಮರಳಿ ಮರಳಿ ಹೇಳುತ್ತಲಿದ್ದಳು. ಆಕೆಯ ಮನಸ್ಸು ಹಾಡುತ್ತಿರುವ ಹಾಡಿನಮೇಲೆ ಇಲ್ಲವೆಂಬುದು ಒಡೆದು ತೋರುತ್ತಿದ್ದಿತು; ಆದರೆ ಅವಳು ಧನ್ಯಾಸಿ ರಾಗದಲ್ಲಿ ಮೆಲ್ಲಗೆ ಹೇಳುತ್ತಿರುವ ಈ ಪಲ್ಲವಿಯನ್ನು ಕೇಳಿದವರಿಗೆ, ಇವಳು ಚೆನ್ನಾಗಿ ಹಾಡಬಲ್ಲಳೆಂಬುದು ಕಂಡುಬರುವಂತಿದ್ದಿತು. ಇನ್ನಾವುದರ ಅರಿವೇ ಆಕೆಗಿರಲಿಲ್ಲ; ತಾನೇ ತಾನು; ಹಾಡೇ ಹಾಡು.

ನಾಡಗೌಡರ ಮನೆಗೆ ನಿತ್ಯವೂ ಹೂಮಾಲೆಗಳನ್ನು ತಂದುಕೊಡುವ ಹೂವಡಿಗನು ಬಂದನು. ಬೀದಿಯ ಜಗುಲಿಯ ಮೇಲೆ ಕುಳಿತ ಹುಚ್ಚಿಯನ್ನು ನೋಡಿದನು. ಹುಚ್ಚಿಯನ್ನು ಕಂಡಾಗ ತಮಾಷೆ ಮಾಡಬೇಕೆಂದು ಯಾವನಿಗೆನಿಸದು! ಹೂವಡಿಗನು ಬಂದು ಹುಚ್ಚಿಯೆದುರಿನಲ್ಲಿ ನಿಂತನು. ನಗುನಗುತ್ತ ಕೇಳಿದನು: "ಹೂಮಾಲೆ ಬೇಕೇನಮ್ಮಾ ನಿನಗೆ?" ಹುಚ್ಚಿ ಹಾರಿಬಿದ್ದು ಕಣ್ಣುತೆರೆದಳು. ಕುತೂಹಲ ಭಾವದಿಂದ ಕೇಳಿದಳು: "ಎಲ್ಲಿ ನಿನ್ನ ಹೂಮಾಲೆ ನೋಡೋಣ!" ಹೂವಡಿಗನು ತನ್ನ ಪುಟ್ಟಿಯೊಳಗಿಂದ ಒಂದೊಂದಾಗಿ ಎತ್ತಿ ಹೂಮಾಲೆಗಳನ್ನು ತೋರಿಸಿದನು. ಅವಳು ಮಾಲೆಗಳಲ್ಲಿಯ ಹೂಗಳಿಗಿಂತಲೂ ಹೆಚ್ಚಾಗಿ ಅರಳಿದ ಕಣ್ಣುಗಳಿಂದ, ಎಲ್ಲವನ್ನೂ ನಿಟ್ಟಿಸಿ ನೋಡಿಯೆ ನೋಡಿದಳು. ನೋಡುತ್ತಿರುವಾಗ ಮೆಲುನಗೆಯು ಅವಳ ಮೊಗದಲ್ಲಿ ಮಿನುಗುತ್ತಿದ್ದಿತು. ನೋಡುವುದಾದೊಡನೆಯೆ ಹಿಗ್ಗಿದೆದೆಯಿಂದ ಹೇಳಿದಳು: "ಸೊಗಸಾದ ಹೂವು, ಅಂದವಾಗಿ ಮಾಲೆ ಕಟ್ಟಿರುತ್ತೀಯೆ. ನೋಡು, ನನಗೆ ಹೂಮಾಲೆಯಲ್ಲಿ ಬಲುಬಲು ಆಶೆ ಅವರು ದಿನಾಲು ನನಗೆ ಹೂಮಾಲೆ ತಂದುಕೊಡುವರು; ಒಂದೇ ಒಂದು ದಿನ ತಪ್ಪುವುದಿಲ್ಲ. ಅವರು ಬರುತ್ತಾರೆ. ಆಗ ನೀನು ಬಂದುಬಿಡು! ಈ ಮಾಲೆಗಳನ್ನೆಲ್ಲ ತೆಗೆದುಕೊಳ್ಳುವಂತೆ ಅವರಿಗೆ ಹೇಳುತ್ತೇನೆ." ಹುಚ್ಚಿಯ ಈ ಬಡಬಡಿಕೆಗೆ ಹೂವಡಿಗನು ಗಟ್ಟಿಯಾಗಿ ನಕ್ಕುಬಿಟ್ಟನು. ಹುಡುಗಾಟದ ಮಾತಿನಲ್ಲಿಯೆ ಹೇಳಿದನು: "ಆಗಲಮ್ಮಾ ಬಂದುಬಿಡುತ್ತೇನೆ" ಎಂದು ನುಡಿದವನೇ ಹೂವಡಿಗ ತನ್ನ ಕೆಲಸಕ್ಕಾಗಿ ನಾಡಗೌಡರ ಮನೆಯೊಳಕ್ಕೆ ಹೋದನು.

ಹುಚ್ಚಿಯಾಡಿದ ಮಾತುಗಳೆಲ್ಲವೂ ನನಗೊಂದು ಒಡೆಯದ ಒಗಟವಾಗಿ ಕಂಡುವು. "ಇದೆಂತಹದು ಇವಳ ಹುಚ್ಚು?...." ಎಂಬ ಯೋಚನೆ

ಯಲ್ಲಿಯೆ ಮುಂದೆ ಸಾಗಿದೆನು. 'ನಿನ್ನೆಯು ದಿನವೆಲ್ಲ ಇವಳಿಗೆ ನಿರಾಹಾರ' ಎಂಬ ಮಾತು ನೆನಪಾದೊಡನೆಯೆ ಮನಸ್ಸು ತುಂಬ ಕಳವಳಗೊಂಡಿತು.

ಮಧ್ಯಾಹ್ನ ಮನೆಯಲ್ಲಿ ಊಟವಾಯಿತು. ಹುಣ್ಣಿಮೆಯಾದುದರಿಂದ ಹಬ್ಬದಡಿಗೆಯಾಗಿದ್ದಿತು. ನನ್ನಂತೆಯೆ ನಮ್ಮ ತಾಯಿಗೂ ಹುಚ್ಚಿಯು ಸಲುವಾಗಿ ಮರುಕವೆನಿಸಿದ್ದಿತೇನೋ! ಎಲ್ಲರ ಊಟವಾದ ಮೇಲೆ ಏನೇನೋ ಕೊಂಚ ತಿಂಡಿಯು ಪದಾರ್ಥಗಳನ್ನು ತೆಗೆದುಕೊಂಡು, ನಮ್ಮ ತಾಯಿ "ಪಾಪ! ಹುಚ್ಚಿಗೆ ಇದನ್ನಷ್ಟು ಕೊಟ್ಟು ಬರುತ್ತೇನೆ" ಎಂದು ಹೇಳಿ ಹೊರಟಳು. ನಾನೂ ಜೊತೆಯಲ್ಲಿ ಬರುವೆನೆಂದೆ. ಇಬ್ಬರೂ ಹುಚ್ಚಿಯು ಬಳಿಗೆ ಹೋದೆವು. ಆಗ ಅವಳು ಹನುಮನ ಗುಡಿಯು ಕಟ್ಟೆಯು ಮೇಲೆ ತನ್ನ ಮೊದಲಿನ ಸ್ಥಳದಲ್ಲಿಯೇ ಕುಳಿತಿದ್ದಳು. ನಾಲ್ಕಾರು ಜನ ಹಿರಿಯರಾದ ಹೆಂಗಸರು ಬಂದು, ಊಟಕ್ಕಾಗಿ ತಮ್ಮ ಮನೆಗೆ ಬರುವುದಕ್ಕೆ ಹುಚ್ಚಿಯನ್ನು ಒತ್ತಾಯಪಡಿಸುತ್ತಿದ್ದರು. ಆಕೆ ಯಾರ ಮಾತುಗಳನ್ನೂ ಗಣನೆಗೆ ತಾರದೆ, ಯೋಗಿನಿಯಂತೆ ಧ್ಯಾನಸ್ಥಳಾಗಿ ಕುಳಿತಿದ್ದಳು. ನಾವು ಅಲ್ಲಿಗೆ ಹೋದಾಗ, ಅದೇತಕ್ಕೋ ಏನೋ! ಅವಳ ಮೊಗದ ಮೇಲೆ ಮುಗುಳುನಗೆಯು ಮೊಗದೋರಿದ್ದಿತು. ಮತ್ತೆ ಒಂದೆರಡು ನಿಮಿಷಗಳಲ್ಲಿಯೇ ಆ ನಗೆಯು ಅಡಗಿ ಗಂಭೀರತೆಯು ನೆಲೆಯೂರಿತು. ನಮ್ಮ ತಾಯಿ ಒಳ್ಳೆಯ ಅಂತಃಕರಣದ ಜೀವಿ. ಮಡಿ ಮೈಲಿಗೆ ಯಾವುದನ್ನೂ ಮನಸ್ಸಿನಲ್ಲಿ ತಾರದೆ ಹುಚ್ಚಿಯು ಮೈತಟ್ಟಿ ಎಚ್ಚರಿಸಿದಳು. "ಇದು ನೋಡಮ್ಮಾ" ಎಂದು ಕೂಗಿದಳು. ಹುಚ್ಚಿ ಕಣ್ದೆರೆದು ನೋಡಿದಳು. ತಾಯಿ ತಾನು ತಂದಿದ್ದ ತಿಂಡಿಯನ್ನು ಮುಂದಿಟ್ಟು "ತೆಗೆದುಕೊ ಇದನ್ನು ತಿನ್ನು" ಎಂದು ಹೇಳಿದಳು. ಹುಚ್ಚಿಯು ಬೆರಗುಗೊಂಡವಳಾಗಿ, ಎವೆಯಿಕ್ಕದ ಕಣ್ಣುಗಳಿಂದ ತಿಂಡಿಯು ಕಡೆಗೊಮ್ಮೆ ನಮ್ಮ ತಾಯಿಯು ಮುಖದ ಕಡೆಗೊಮ್ಮೆ ನೋಡುತ್ತ ಸುಮ್ಮನೆ ಕುಳಿತುಬಿಟ್ಟಳು. ನಮ್ಮ ತಾಯಿ ಮತ್ತೆ ಹೇಳಿದಳು: "ಏನು ನಿನ್ನ ಹೊಟ್ಟೆ ಹಸಿದಿಲ್ಲವೇ? ತಿನ್ನಮ್ಮಾ, ತಿಂದುಬಿಡು." ಹುಚ್ಚಿ ನಗುನಗುತ್ತಲೆ ಮಾತನಾಡಿದಳು: "ಅಮ್ಮಾ! ಅವರು ಬರಲಿ; ಚಿತ್ರಾನ್ನದಲ್ಲಿ ಅವರ ಪ್ರೀತಿ ಬಹಳ. ಅವರು ಬಂದು ಇದನ್ನು ತಿಂದರೆಂದರೆ ನಾನೂ ತಿನ್ನುತ್ತೇನೆ. ಅವರು ತಿಂದರೆ ನಾನು ತಿಂದಂತೆಯೇ ಆಗುವುದು........" ಇನ್ನೂ ಮುಂದೆ ಏನೇನೋ ಹೇಳುವವಳಿದ್ದಳು. 'ತನ್ನ ಮಾತನ್ನು ಕೇಳಿ

ಇವಳು ಸುಮ್ಮನೆ ತಿನ್ನಲೊಲ್ಲಳಲ್ಲ!' ಎಂದು ನಮ್ಮ ತಾಯಿಗೆ ಕೊಂಚ ಕೋಪ ಬಂದಿತು. ಅಲ್ಲದೆ ಮನೆಯಲ್ಲಿ ಕೆಲಸಕ್ಕೆ ತಡವಾಗುವುದೆಂಬ ಎದೆಗುದಿ ಬೇರೆ. ಹುಚ್ಚಿಯು ಬಡಬಡಿಕೆಗೆ ರೇಗಿ ನುಡಿದಳು: "ಹೋಗೇ! ನಿನ್ನ ಅವರನ್ನು ಒಯ್ದು ಒಲೆಗೆ ಹಾಕು! ಹೇಳಿದಂತೆ ಕೇಳಿ ಸುಮ್ಮನೆ ತಿಂದುಬಿಡಬಾರದೇ!"

ಅಮ್ಮನಾಡಿದ ಮಾತಿಗೆ ಹುಚ್ಚಿ ಮುಖವನ್ನು ಮುದುಡಿಸಿದಳು. ಎರಡು ಕಣ್ಣುಗಳನ್ನೂ ಗಟ್ಟಿಯಾಗಿ ಮುಚ್ಚಿಕೊಂಡಳು. ಯಾರು ಮಾತನಾಡಿಸಿದರೂ ಮಾತುಗಳೇ ಇಲ್ಲ. ರೇಗಿಗೆದ್ದ ತಾಯಿಯೂ ಮತ್ತೆ ಸಮಾಧಾನವನ್ನು ತಂದುಕೊಂಡು, ಬಗೆಬಗೆಯಾದ ಮರುಕದ ಮಾತುಗಳನ್ನಾಡಿದಳು. ಏನು ಮಾಡಿದರೂ ಮುಚ್ಚಿದ ಕಣ್ಣು ತೆರೆಯಲಿಲ್ಲ. ಬಾಯಿಬಿಚ್ಚಿ ಮಾತನಾಡಲಿಲ್ಲ. ಬರುಬರುತ್ತ ಆಕೆಯ ಮುಖಭಾವದಲ್ಲಿ ಮಾರ್ಪಾಟಾಗಲು ತೊಡಗಿತು. ತೀರ ಬಳಿಯ ಆಪ್ತರನ್ನು ಕಂಡಾಗ ಮುಖವು ಅರಳುವಂತೆ ಆಕೆಯ ಮುಖವು ಅರಳಿತು. ಎಂತಹದೊ ಒಂದು ಅತಿಶಯವಾದ ಆನಂದವು ಆಕೆಯ ಎದೆಯನ್ನು ಹಿಗ್ಗಿಸುತ್ತಿದ್ದಂತೆ ತೋರಿತು. ಇದುವರೆಗೆ ನಾನು ಹಲವು ಜನ ಹುಚ್ಚರನ್ನು ನೋಡಿದ್ದೇನೆ. ಆದರೆ ಈ ಹುಚ್ಚಿಯು ಹುಚ್ಚಿನ ಮಾದರಿಯೇ ಅದೊಂದು ಬಗೆಯದು. ಕೊನೆಗೂ ಆಕೆ ತಿಂಡಿಯನ್ನು ಮುಟ್ಟಲಿಲ್ಲ. ಹಂಚಿಕೆಗಾಣದವರಾಗಿ ನಾವಿಬ್ಬರೂ ಮನೆಗೆ ಬಂದುಬಿಟ್ಟೆವು. ನಾವು ಕಣ್ಮರೆಯಾದೊಡನೆಯೇ ಹುಚ್ಚಿ ತನ್ನ ಮುಂದಿದ್ದ ತಿಂಡಿಯನ್ನು ಅತ್ತಿತ್ತ ಚೆಲ್ಲಾಡಿ, ಹಕ್ಕಿಗಳಿಗೆ ತಿನ್ನಿಸಿಬಿಟ್ಟಳಂತೆ. ನಾನು ನೋಡುತ್ತಿದ್ದ ಹಾಗೆಯೆ ಅವಳಿಗೆ ಎರಡು ದಿನಗಳ ನಿರಾಹಾರ; ಆದರೆ ನಿರಾಹಾರದ ಬಲಹೀನತೆಯ ಚಿಹ್ನೆಗಳಾವುವೂ ಕಾಣುತ್ತಿರಲಿಲ್ಲ. ಊರಲ್ಲಿ ಎಲ್ಲರ ಬಾಯಲ್ಲಿಯೂ ಹುಚ್ಚಿಯ ಹುಚ್ಚಾಟದ ನಗೆಮಾತು; ಅವಳ ಚೆಲುವಿಕೆಯ ಬಣ್ಣನೆಯ ಮಾತು. ಒಂದೊಂದು ಸಲ ಆಕೆಯ ವಿಷಯದಲ್ಲಿ ಮರುಕವನ್ನು ಹೊರಪಡಿಸುವ ಮಾತುಗಳೂ ಕಿವಿಗೆ ಬೀಳುತ್ತಿದ್ದುವು.

## ೩. ಇಂದು

ನಮ್ಮ ಕಮಲಕ್ಕನ ಊರನ್ನು ಆಕೆಯ ಮದುವೆಯ ಕಾಲಕ್ಕೆ ಮಾತ್ರ ಒಂದು ಸಲ ನೋಡಿದ್ದೇನೆ. ಆ ಮಾತಿಗೆ ಹತ್ತು ವರ್ಷಗಳಾಗಿ ಹೋದುವು.

ಅದೆಷ್ಟೋ ಸಲ ಕಮಲಕ್ಕ ನನಗೆ ಬರುವುದಕ್ಕೆ ಹೇಳಿ ಕಳುಹಿಸುವಳು. ಮನೆಯಲ್ಲಿ ನಾನು ಒಬ್ಬೊಂಟಿಗ, ಏನೇನೋ ಕೆಲಸದ ಗಲಾಟೆ; ಇದು ವರೆಗೂ ಹೋಗುವುದಕ್ಕಾಗಿಲ್ಲ. ಈಗ ನಾಲ್ಕು ದಿನಗಳ ಹಿಂದೆ ಕಮಲಕ್ಕ ಒಂದು ಕಾಗದ ಬರೆದಿದ್ದಳು. ಅದರಲ್ಲಿ "ಇಲ್ಲಿಗೊಮ್ಮೆ ಬಂದು ಹೋಗು ವುದಕ್ಕೆಂದು ನಾನೆಷ್ಟೋ ಸಲ ನಿನಗೆ ಹೇಳಿ ಕಳುಹಿಸಿದೆ. ಈ ಸಲ ಬಾರ ದಿದ್ದರೆ ನಾನು ಕೇಳುವವಳಲ್ಲ. ಬರುವ ವದ್ಯ ಪಂಚಮಿಯ ದಿವಸ ನಿನ್ನ ಸೋದರಳಿಯನ ಹುಟ್ಟಿದ ಹಬ್ಬ. ನಿನ್ನನ್ನು ಕರೆದುಕೊಂಡು ಬರುವುದ ಕ್ಕಾಗಿ ನನ್ನ ಅಪೇಕ್ಷೆಯಂತೆ ಭಾವನವರು ತಾವೇ ಬರುತ್ತಿರುವರು. ನೀನು ಬಂದೇ ಬರಬೇಕು. ತಪ್ಪಿಸಬಾರದು." ಎಂದಿದ್ದಿತು.

ಇಂದು ಕಮಲಕ್ಕನ ಭಾವ ಸುಬ್ಬರಾಯರು ಬಂದರು. ನನಗೇನೋ ಆ ಹುಚ್ಚಿಯ ಸ್ಮರಣೆಯೇ ಸ್ಮರಣೆ. ಆದರೂ ತಕ್ಕ ಮರ್ಯಾದೆಯಿಂದ ಸುಬ್ಬರಾಯರನ್ನು ಬರಮಾಡಿಕೊಂಡೆನು. ಸುಬ್ಬರಾಯರ ಬರುವಿಕೆಯಿಂದ ನಮ್ಮ ತಾಯಿಗೆ ತುಂಬಾ ಹಿಗ್ಗು. ಕಮಲಕ್ಕನ-ಆಕೆಯ ಮಕ್ಕಳ ಕುಶಲ ವಾರ್ತೆಯನ್ನು ಕೇಳಿ ಆಕೆಗೆ ಆನಂದವೇ ಆನಂದ. ಸುಬ್ಬರಾಯರ ಉಪ ಹಾರದ ಏರ್ಪಾಡಿನಲ್ಲಿ ತಾಯಿ ತೊಡಗಿದಳು. ನಾವಿಬ್ಬರೂ ಕೊಂಚಕಾಲ ಆ ಮಾತು ಈ ಮಾತು ಆಡುತ್ತ ಕುಳಿತೆವು. ಬಳಿಕ ನನ್ನ ಮನಸ್ಸನ್ನೆಲ್ಲ ಮನೆ ಮಾಡಿಕೊಂಡಿದ್ದ ಆ ಹುಚ್ಚಿಯ ಕತೆಯನ್ನು ಸುಬ್ಬರಾಯರೆದುರಿಗೆ ಬಿಚ್ಚಿ ದೆನು. ಮೊದಲಿನಿಂದ ಇದುವರೆಗೆ-ನಾನು ನೋಡಿದ-ಹುಚ್ಚಿಯ ವ್ಯವ ಹಾರವನ್ನೆಲ್ಲ ಇದ್ದುದಿದ್ದಂತೆಯೆ ಬಣ್ಣಿಸಿದೆನು. ಆ ಹುಚ್ಚಿಯನ್ನು ಈಗಲೆ ನೋಡಬೇಕೆಂಬ ಕುತೂಹಲವು ಸುಬ್ಬರಾಯರಿಗುಂಟಾಯಿತು. ನಡೆದು ಬಂದ ಬಳಲಿಕೆಯನ್ನು ಬಗೆಗೆ ತಾರದೆ, ಉಪಹಾರದ ದಾರಿಯನ್ನೂ ನೋಡದೆ ಹಾಗೆಯೆ ಎದ್ದುಬಿಟ್ಟರು. ಇಬ್ಬರೂ ಜೊತೆಯಾಗಿ ಹುಚ್ಚಿ ಯಿದ್ದಲ್ಲಿಗೆ ಹೊರಟು ನಡೆದೆವು.

ಎಂದಿನಂತೆಯೆ ಅವಳು ಗುಡಿಯ ಕಟ್ಟೆಯ ಮೇಲೆ ಕುಳಿತುಕೊಂಡಿ ದ್ದಳು. ಹುಡುಗರು ಹಿಂಡುಗಟ್ಟಿ ನಿಂತೇ ಇದ್ದರು. ಹುಡುಗರಾಡುವ ಮಾತುಗಳ ಕಡೆಗೆ ಕಿವಿಗೊಡದೆ, ಹುಚ್ಚಿ ಮುಗಿಲ ಕಡೆಗೆ ನೋಟವನ್ನು ನೆಲೆ ಗೊಳಿಸಿ ಕುಳಿತಿದ್ದಳು. ಹಾಗೆ ಕುಳಿತಿದ್ದವಳೇ ತಟ್ಟನೆ ಮುಗಿಲ ಕಡೆಗೆ ಕೈಚಾಚಿದಳು. ಹಿಗ್ಗಿದ ಮುಖದವಳಾಗಿ ನುಡಿದಳು: "ಅದೋ ಅಲ್ಲಿ

ಅವರು........" ಬಳಿಕ ನಿದಾನವಾಗಿ ಕೈ ಕೆಳಕ್ಕಿಳಿಯಿತು. ತೊಡೆಯ ಮೇಲೆ ಬಿದ್ದುಕೊಂಡಿತು. ಇದನ್ನೆಲ್ಲ ನೋಡುತ್ತಲೆ ನಾವು ಆಕೆಯ ಬಳಿಗೆ ಹೋದೆವು. ನಾವು ಬಂದು ನಿಂತುದರ ಕಡೆಗೆ ಅವಳ ಲಕ್ಷ್ಯವೇ ಇರಲಿಲ್ಲ. ಸುಬ್ಬರಾಯರು ಆಕೆಯನ್ನು ನೋಡಿದರು. ಕೂಡಲೆ ಬಾಡಿದ ಮುಖದವರಾದರು. ಕಣ್ಣಲ್ಲಿ ಕಂಬನಿಗಳೂ ತೋರಿದುವು. ಬಿಗಿದು ಬರುತ್ತಿರುವ ಕಂಠದಿಂದ ಅವರು ಕೂಗಿ ಕರೆದರು: "ಗೌರಮ್ಮಾ!"

ಹುಚ್ಚಿ ಕಣ್ಣರಳಿಸಿ ಸುಬ್ಬರಾಯರನ್ನು ನೋಡಿದಳು. ಆತುರದ ದನಿಯಲ್ಲಿ ನುಡಿದಳು: "ಏನು ಮಾವ! ಒಬ್ಬನೇ ಬಂದೆ? ಅವರು ಬರಲ್ಲಿವೇ?"

ಸುಬ್ಬರಾಯರಿಗೆ ದುಃಖ ಒತ್ತರಿಸಿ ಬಂದಿತು. ಮಾತನಾಡಲು ಬಾರದಾಯಿತು. ಕಣ್ಣನ್ನು ಗಟ್ಟಿಯಾಗಿ ಮುಚ್ಚಿ, ತಲೆಯನ್ನು ಅಲ್ಲಾಡಿಸುತ್ತ ಉತ್ತರೀಯದ ಸೆರಗಿನಿಂದ ಕಂಬನಿಯೊರಸಿಕೊಂಡರು. ಇದನ್ನೆಲ್ಲ ನಾನು ಕನಸಿನಲ್ಲಿ ನೋಡುತ್ತಿರುವೆನೇನೋ ಎಂದೆನಿಸಿತು. ಸುಬ್ಬರಾಯರ ಸ್ಥಿತಿಯನ್ನು ನೋಡಿ ನಾನು ಹುಚ್ಚನಂತಾದೆನು. ಎವೆಯಿಕ್ಕದ ನೋಟದಿಂದ ಅವರನ್ನೊಮ್ಮೆ, ಹುಚ್ಚಿಯನ್ನೊಮ್ಮೆ ನೋಡುತ್ತ ನಿಂತೆನು. ಹೀಗೇಕೆಂದು ಕೇಳುವುದಕ್ಕೆ ನಾಲಗೆ ಹವಣಿಸತೊಡಗಿತು. ಆದರೆ ಆಗಿನ ಸ್ಥಿತಿಯಲ್ಲಿ ಸುಬ್ಬರಾಯರನ್ನು ಮಾತನಾಡಿಸುವುದಕ್ಕೆ ಮನಸ್ಸು ಬೇಡವೆಂದಿತು. ಸುಬ್ಬರಾಯರು ದುಃಖದ ಉಕ್ಕನ್ನು ನುಂಗಿಕೊಳ್ಳುತ್ತ ಮಾತನಾಡಿದರು:

"ಗೌರಮ್ಮಾ! ನಿನ್ನ ತಾಯಿ, ಪಾಪ...ನಿನಗಾಗಿ ಹಂಬಲಿಸುತ್ತ ಮನೆಯಲ್ಲಿ ಬಿದ್ದಿದ್ದಾಳೆ. ಅವಳನ್ನು ಬಿಟ್ಟು ಏತಕ್ಕಮ್ಮಾ ಇಲ್ಲಿಗೆ ಬಂದಿದ್ದೀಯೆ....?"

ಒಡನೆಯೆ ಹುಚ್ಚಿ ನುಡಿದಳು: "ಅವರನ್ನು ಕರೆದುಕೊಂಡು ಬರಲಿಕ್ಕೆ!"

ಸುಬ್ಬರಾಯರ ಅಳುವು ಹೊಟ್ಟೆಯಲ್ಲಿ ಹಿಡಿಸಲಾರದೆ ಹೊರಬಿದ್ದಿತು. ನಡುಗುತ್ತಿರುವ ದನಿಯಲ್ಲಿ ಅವರು ಮಾತನಾಡಿದರು: "ಪಾಪ! ಈಕೆಯಿನ್ನು ಅವರನ್ನು ಕರೆದುಕೊಂಡು ಬರುವಳಂತೆ. ತೀರ ಹುಚ್ಚಿಯಾಗಿ ಹೋಗಿದ್ದಾಳೆ." ಕೊಂಚವೇಳೆ ಮಾತನಾಡದೆ ನಿಂತರು. ಮತ್ತೆ ನುಡಿದರು: "ಅಮ್ಮಾ! ನಿನ್ನ ತಾಯಿಯ ಬಳಿಗೆ ನಡೆಯಮ್ಮಾ ಹೋಗೋಣ!"

ಹುಚ್ಚಿ ಅದೇನೋ ಒಂದು ಬಗೆಯಾಗಿ ನಕ್ಕಳು. ಮತ್ತೆ ಕಣ್ಣು ಮುಚ್ಚಿ ಕಲ್ಲ ಬೊಂಬೆಯಂತೆ ಕುಳಿತಳು. ಸುಬ್ಬರಾಯರು ಅವಳನ್ನು

ಮಾತನಾಡಿಸಬೇಕೆಂದು ಮಾಡಿದ ಹವಣಿಕೆಯೆಲ್ಲವೂ ನಿರರ್ಥಕವಾಯಿತು. ಬಳಿಕ ಅವರು ಯಾವುದೂ ತಿಳಿಯದವರಾಗಿ ತೆಪ್ಪಗೆ ಕುಳಿತುಬಿಟ್ಟರು. ಕಣ್ಣೀರು ಗಲ್ಲದಮೇಲೆ ಧಾರೆಗೊಂಡಿದ್ದಿತು. ಅಲ್ಲಿ ನೆರೆದ ಜನರು "ಈಕೆ ಯಾರು ಸ್ವಾಮಿ! ಈಕೆ ನಿಮ್ಮವಳೇನು ಸ್ವಾಮೀ!! ಈಕೆಯ ಊರು ಯಾವುದು ರಾಯರೇ!" ಎಂಬುದಾಗಿ ಹಲವು ಬಗೆಯ ಪ್ರಶ್ನೆಗಳನ್ನು ಕೇಳುತ್ತಿದ್ದರು. ಸುಬ್ಬರಾಯರು ಯಾವುದಕ್ಕೂ ಮರುನುಡಿ ಕೊಡದೆ, ನಿಟ್ಟುಸಿರೊಂದನ್ನು ಬಿಟ್ಟು, ಮೋರೆಮುದುಡಿಸಿ ಹೀಗೆ ಕೈಮಾಡಿಬಿಟ್ಟರು. "ಕಿಟ್ಟಣ್ಣಾ! ಮನೆಗೆ ನಡೆಯಪ್ಪಾ! ಮತ್ತೆ ಬೇರೆ ಅವಸರದ ಕೆಲಸವಿದೆ" ಎಂದು ನುಡಿದು ಅಲ್ಲಿಂದ ನಡೆದೇಬಿಟ್ಟರು. ಅವರನ್ನು ಹಿಂಬಾಲಿಸಿ ನಾನೂ ಹೊರಟೆನು. ಹೋಗುತ್ತಿರುವಾಗ ಸುಬ್ಬರಾಯರೂ ಮಾತನಾಡಲಿಲ್ಲ. ಹುಚ್ಚಿ ಯಾರೆಂಬುದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವೇನೋ ಎಡೆಬಿಡದೆ ನನ್ನೆದೆಯಲ್ಲಿ ಕುಣಿಯುತ್ತಿದ್ದಿತು.

ಮನೆಗೆ ಬಂದೆವು. ನಿಡಿದಾದೊಂದು ಉಸಿರನ್ನು ಹಾಕಿ, ಸುಬ್ಬರಾಯರು ಬಲವಿಲ್ಲದವರಂತೆ ದಿಂಬಿಗೆ ಒರಗಿ ಬಿದ್ದುಕೊಂಡರು. ಆಗ ನಾನು ಒಂದು ಸಲ ಏನೋ ಮಾತನಾಡಿಸಿದೆ. ನನ್ನ ಮಾತಿನ ಕಡೆಗೆ ಸುಬ್ಬರಾಯರ ಚಿತ್ತವೇ ಇರಲಿಲ್ಲ.

ನಮ್ಮ ತಾಯಿ ಬಂದು ಸುಬ್ಬರಾಯರನ್ನು ಉಪಹಾರಕ್ಕೆಂದು ಎಬ್ಬಿಸಿದಳು. "ನಾನೀಗ ಒಲ್ಲೆ!" ಎಂದು ಸುಬ್ಬರಾಯರೆಂದರು. "ಅವರಿಗೀಗ ವಿಶೇಷ ಬಲುಮೆ ಮಾಡಬೇಡವಮ್ಮಾ!" ಎಂದು ನಾನೂ ಹೇಳಿದೆ. ಆದರೆ ಅವಳಿಗೆ ಏನು ಗೊತ್ತು! "ಇದೇನೋ ಹುಚ್ಚುಚ್ಚಾದರೂ; ಈಗ ಮಾಡಿದುದನ್ನೆಲ್ಲ ಕೆಡಿಸಿಬಿಡಬೇಕೇನು!" ಎಂದು ನನ್ನ ಮೇಲೆ ರೇಗಿದಳು. "ಇರಲಿ ಬಿಡು! ಈಗ ಹೋಗಲೊಲ್ಲದೇಕೆ" ಎಂದು ನಾನು ಹೇಳಿದೆ ತಾಯಿ ಕೋಪದಿಂದಲೆ ಹೊರಟುಹೋದಳು.

ಬಿದ್ದುಕೊಂಡಿದ್ದ ಸುಬ್ಬರಾಯರು ಮೆಲ್ಲಗೆ ಎದ್ದು ಕುಳಿತರು. ನನ್ನ ಕಡೆಗೆ ನೋಡುತ್ತ ಕನಿಕರದ ದನಿಯಲ್ಲಿ ಮಾತನಾಡಿದರು: "ಕಿಟ್ಟಣ್ಣಾ! ಎಂತಹ ಹುಡುಗಿ...ಪಾಪ! ಹುಚ್ಚು ಹಿಡಿದುಬಿಟ್ಟದೆ ನೋಡು!

ನಾನು ಆತುರದಿಂದ ಕೇಳಿದೆ: "ಅವಳು ಯಾರು? ಎಲ್ಲಿಯವಳು?"

ಸುಬ್ಬರಾಯರು ಉಸಿರುಗಳೆದು ಜಡವಾದ ದನಿಯಲ್ಲಿ ಹೇಳಿದರು:

"ನಮ್ಮ ಊರಿನವಳೇ; ನಮ್ಮೂರ ಪಾಠಶಾಲೆಯ ಉಪಾಧ್ಯಾಯನ ಹೆಂಡತಿ!"

ಮತ್ತೆ ನಾನು ಕೇಳಿದೆ: "ಹೀಗೇತಕ್ಕೆ ಅವಳ ಪಾಡು? ಹುಚ್ಚು ಹಿಡಿದಿದೆಯೇಕೆ?"

"ಅವಳದೊಂದು ಕರುಣಕಥೆ. ಅದೆಲ್ಲ ನೆನಪಾದರೆ ಎದೆಯು ಗಡ ಗಡನೆ ನಡುಗುವುದು ......" ಸುಬ್ಬರಾಯರು ಇದಿಷ್ಟು ಮಾತನ್ನಾಡಿ ಸಸು ವೇಳೆ ಸುಮ್ಮನೆ ಕುಳಿತರು. ಬಳಿಕ ಮತ್ತೆ ಮಾತನಾಡಲು ತೊಡಗಿದರು:

"ಕಿಟ್ಟಣ್ಣ! ಈ ಹುಡುಗಿಯ ಹೆಸರು ಗೌರಿ. ಆರು ವರ್ಷದವಳಿದ್ದಾಗಲೆ ತಂದೆ ತೀರಿ ಹೋದ. ಬಡತನದ ಬಾಳುವೆ ಬೇರೆ. ಮನೆಯಲ್ಲಿ ಸಂಪಾದಿಸುವವರಾರೂ ಇರಲಿಲ್ಲ. ಆದ್ದರಿಂದ ಈ ಹುಡುಗಿಯ ತಾಯಿ ಎಷ್ಟೆಷ್ಟೋ ಕಷ್ಟನಷ್ಟಗಳನ್ನು ಸಹಿಸಿ, ಎರಡನೆಯವರ ಮನೆಯಲ್ಲಿ ಊಳಿಗ ಮಾಡಿ, ದೊರೆತಷ್ಟರಲ್ಲಿಯೆ ಜೀವನ ಸಾಗಿಸುತ್ತ ಮಗಳನ್ನು ಚಿಕ್ಕವಳನ್ನು ದೊಡ್ಡವಳನ್ನಾಗಿ ಮಾಡಿದಳು. ಆಕೆಯ ಬಡತನದ ಬಾಳಿನ ಅಳಲು ಕಲ್ಲನ್ನೂ ಕರಗಿಸುವಂತಹದು. ನೋಡು....ಬಲವಿಲ್ಲದ ಕಾಲಕ್ಕೆ ನೆಲಪದ್ದು ಬಡಿಯುವುದು-ಎಂದಾಡುವುದೇನು ಸುಳ್ಳೇ! ಕೆಟ್ಟ ಕಾಲದಲ್ಲಿ ಊರಲ್ಲಿಯ ಜನರು ಆ ತಾಯಿ-ಮಕ್ಕಳಿಗೆ ನೆರವಾಗುವುದು ಒತ್ತಟ್ಟಿಗುಳಿಯಿತು. ಯಾರಾದರೂ ಸಹೃದಯರು ಅವರಿಗೇನಾದರೂ ಸಹಾಯ ಮಾಡಿದರೆ, ಅಲ್ಲದ ಸಲ್ಲದ ಆರೋಪಣೆಗೆ ಗುರಿಯಾಗಬೇಕಾಗುತ್ತಿದ್ದಿತು. ಇವಳ ತಾಯಿ ಬಲು ಒಳ್ಳೆಯವಳು; ಸುಶೀಲೆಯು; ಸಚ್ಚರಿತ್ರಳು; ಒಳ್ಳೆಯ ಸಂಸ್ಕಾರವನ್ನು ಪಡೆದವಳು. ಅವಳಿಗಾಗಿ ನನ್ನ ಮನಸ್ಸು ತುಂಬ ಕಳವಳಗೊಳ್ಳುತ್ತಿದ್ದಿತು. ಆಗಾಗ ಯಾವುದಾದರೂ ರೀತಿಯಿಂದ ಆಕೆಗೆ ನೆರವು ಕೊಡುತ್ತಿದ್ದೆನು. ಇದರಿಂದ ಊರ ಜನರ ಸಲ್ಲದ ದೂರಿಗೆ ನಾನೂ ಒಳಗಾಗಬೇಕಾಯಿತು.

ಹುಡುಗಿ ಬೆಳೆದು ದೊಡ್ಡವಳಾದಳು. ಬಲು ಚೆಲುವೆ, ಅಲ್ಲದೆ ಅಂತಹ ತಾಯಿಯ ಪೋಷಣೆಯಲ್ಲಿ ಬೆಳೆದುದರಿಂದ ಎಲ್ಲ ರೀತಿ-ನಡೆವಳಿಕೆಗಳನ್ನು ಅರಿತವಳು. ಈ ಹುಡುಗಿಯನ್ನು ತಮ್ಮ ಸೊಸೆಯನ್ನಾಗಿ ತಂದುಕೊಳ್ಳಬೇಕೆಂದು ಅದೆಷ್ಟೋ ಜನರ ಒಳಬಯಕೆ; ಆದರೆ ಆ ಬಯಕೆಗೆ ಬಡತನವೂ ಜನರದೂರಿನನುಡಿಗಳೂ ಅಡ್ಡವಾಗಿ ನಿಲ್ಲುವುವು. ಹುಡುಗಿಗೆ ಎಲ್ಲಿಯಾದರೂ ಒಳ್ಳೆಯ ವರನನ್ನು ಹುಡುಕಬೇಕೆಂದು ನಾನು ಎಷ್ಟೆಷ್ಟೊ ಹವಣಿಸಿದೆ. ನಾನು ಗೊತ್ತುಮಾಡಿದ ಕಡೆಯಲ್ಲೆಲ್ಲ ದುಷ್ಟರಾದ ಜನರು ಇಲ್ಲದುದೊಂ

ದನ್ನು ಹೇಳಿ ಕೇರುಹಾಕಿ ಬಿಡುವರು. ಕೊನೆಗೆ ನಮ್ಮ ಶಾನುನಿಗೇ ಕಂದು ಕೊಂಡು ಬಿಡಬೇಕೆಂದು ಎಣಿಕೆ ಹಾಕಿದೆ. ಆದರೇನು! ಹಾಳು ಗೋತ್ರ ಒಂದಾಗಿಬಿಟ್ಟಿತು. ಹದಿನೇಳು ವರ್ಷಗಳಾದರೂ ಗೌರಿಗೆ ಮದುವೆಯಾಗ ಲಿಲ್ಲ. ಇದರಿಂದಂತೂ ಗೌರಿಯ ತಾಯಿ ಹಗಲಿರುಳೂ ಬೆಂದು ಬೇಗುದಿಗೊಳ್ಳು ತ್ತಿರುವಳು. ತನ್ನ ಸರಿವರಯದ ಹೆಣ್ಣುಮಕ್ಕಳು ಮದುವೆ ಮಾಡಿಕೊಂಡು ಗಂಡಂದಿರೊಡನೆ ಸಂಸಾರ ಮಾಡುತ್ತಿರುವುದನ್ನು ಗೌರಿ ನೋಡುವಳು. ತನಗೂ ಅವರಂತೆ ಗರತಿಯ ಪದವಿಯು ಎಂದು ಸಿಕ್ಕುವುದೋ !–ಎಂದು ಯೋಚಿಸುವಳು; ನಿಟ್ಟುಸಿರಿಡುವಳು.

ನಮ್ಮೂರ ಶಾಲೆಯ ಉಪಾಧ್ಯಾಯರಿಗೆ ಇನ್ನೊಂದೂರಿಗೆ ವರ್ಗವಾ ಯಿತು. ಅವರ ಸ್ಥಳಕ್ಕೆ ಬೇರೊಬ್ಬ ಉಪಾಧ್ಯಾಯನು ಬಂದ. ಶ್ರೀಪತಿ ಯೆಂದು ಅವನಿಗೆ ಹೆಸರು; ವಯಸ್ಸು ಇಪ್ಪತ್ತೈದೋ ಇಪ್ಪತ್ತಾರೋ ಆಗಿರ ಬಹುದು. ಮದುವೆಯಿನ್ನೂ ಆಗಿರಲಿಲ್ಲ. ನಮ್ಮೂರಿಗೆ ಬಂದು ಐದಾರು ತಿಂಗಳಾಯಿತು ಆತನು ತುಂಬ ಕರ್ತವ್ಯನಿಷ್ಠನು, ತಾತ್ತ್ವಿಕನು, ಬಡಬಗ್ಗ ರಲ್ಲಿ ಕನಿಕರವುಳ್ಳವನು. ಯಾವುದಾದರೂ ಮಾತು ತನಗೆ ಸರಿಯೆಂದು ಕಂಡರಾಯಿತು; ಊರಿಗೆ ಊರು ವಿರುದ್ಧವಾದರೂ ತನ್ನ ಮತವನ್ನು ಮಾರ್ಪಡಿಸದವನು; ಸಂಗೀತ ಸಾಹಿತ್ಯಗಳಲ್ಲಿ ಸಾಕಷ್ಟು ಅಭಿರುಚಿಯುಳ್ಳ ವನು. ಒಂದೇ ಮಾತಿನಿಂದ ಹೇಳಬೇಕೆಂದರೆ ಅದೊಂದು ಸುಸಂಸ್ಕೃತಜೀವ. ಆತನ ಈ ಎಲ್ಲ ಗುಣಗಳಿಂದ ನನ್ನಲ್ಲಿ ಆತನ ವಿಷಯಕ್ಕೆ ಆದರವುಂಟಾ ಯಿತು. ಬರುಬರುತ್ತ ಅದು ಸ್ನೇಹದಲ್ಲಿ ಕೊನೆಗಂಡಿತು. ಇಬ್ಬರೂ ಸೇರು ವೆವು; ಸುಖದುಃಖದ ಮಾತುಗಳನ್ನಾಡುವೆವು; ಬೇರೆ ಬೇರೆ ವಿಷಯಗಳನ್ನೆತ್ತಿ ಚರ್ಚೆ ಮಾಡುವೆವು. ಆತನ ತರ್ಕದ ಸರಣಿಯು ಬೆರಗಾಗಿಸುವಂತಹದು.

ಇದ್ದೂರಲ್ಲಿಯ ಸಂಗತಿ; ಗೌರಿಯ—ಆಕೆಯ ತಾಯಿಯ— ವಿಚಾರ ಶ್ರೀಪತಿಗೆ ತಿಳಿಯದಿರುವುದೇ ! ಅವರ ವಿಚಾರವಾಗಿ ಶ್ರೀಪತಿಯು ಸಹಾನು ಭೂತಿಪರವಾದ ಮಾತುಗಳನ್ನು ಆಗಾಗ ಆಡುತ್ತಿದ್ದನು. ಸಮಾಜದ ಮೂಢತನವನ್ನು ಬೀಳುಗಳೆಯುತ್ತಿದ್ದನು. ಹೀಗೆಯೇ ಒಂದು ಸಲ ಮಾತಿಗೆ ಮಾತು ಹೊರಟು ನಾನು ನುಡಿದೆ: “ ಗೌರಿ ಹೂವಿನಂತಹ ಹುಡುಗಿ ! ಪಾಪ ! ಆಕೆಯ ಬದುಕು ನಿರರ್ಥಕವಾಗಿ ಹೋಗುವುದೋ ಏನೋ ! ”

ಶ್ರೀಪತಿ ನಸುವೇಳೆ ಸುಮ್ಮನೆ ಕುಳಿತಿದ್ದು ಬಳಿಕ ತಟ್ಟನೆ ಮಾತ ನಾಡಿದ: "ಏತಕ್ಕೆ ಹಾಗಾಗುವುದು! ಆಕೆಯನ್ನು ಮದುವೆ ಮಾಡಿ ಕೊಳ್ಳಲು ಇನ್ನಾರೂ ಒಪ್ಪದಿದ್ದರೆ ನಾನು ಮಾಡಿಕೊಳ್ಳುವೆನು. ಯಾರು ಏನು ಹೇಳಿದರೂ ನಾನದನ್ನು ಲೆಕ್ಕಕ್ಕೆ ತರುವುದಿಲ್ಲ."

ಗೌರಿಗೆ ತಕ್ಕವನಾದ ಗಂಡನು ದೊರೆತ. ನನಗೆ ತುಂಬ ಆನಂದ ವಾಯಿತು. ತಾಯಿಮಕ್ಕಳ ಒಪ್ಪಿಗೆ ಪಡೆಯುವುದಂತೂ ಕಷ್ಟವೆ ಇರಲಿಲ್ಲ. ಶ್ರೀಪತಿಯು ಒಬ್ಬನೇ ಒಬ್ಬ. ಹತ್ತಿಹೊಂದಿದವರಾರೂ ಇರಲೇ ಇಲ್ಲ. ತಾತ್ತ್ವಿಕನಾದ ಶ್ರೀಪತಿಯು ಇಲ್ಲದ ಆಡಂಬರವನ್ನು ಹೂಡದೆ ಮದುವೆಯ ಕೆಲಸವನ್ನು ಕೊಂಚದರಲ್ಲಿಯೇ ಕೊನೆಗಾಣಿಸಿದನು. ಜನರು ತನಗೆ ಏನೆಂದಾರೆಂಬ ಎಣಿಕೆಯೇ ಆತನಿಗಿರಲಿಲ್ಲ.

ಮಾದರಿಯ ದಾಂಪತ್ಯವದು. ಗಂಡಹೆಂಡಿರಲ್ಲಿದ್ದ ಪರಸ್ಪರ ಪ್ರೀತಿಯ ಕಲ್ಪನೆಯು ಅವರಿಬ್ಬರ ಸಂಸಾರವನ್ನು ನೋಡಿದವರ ತಲೆಯಲ್ಲಿಯೆ ಮೂಡ ಬಹುದು. ಗಂಡನ ಮಾತು ಮೀರಿ ಹೆಂಡತಿಯಿಲ್ಲ; ಹೆಂಡತಿಯ ಮಾತು ಮೀರಿ ಗಂಡನಿಲ್ಲ. ಗಂಡನನ್ನು ಸಂತೋಷದಲ್ಲಿರಿಸಬೇಕೆಂದು ಹೆಂಡತಿಯ ಹವಣಿಕೆ. ಹೆಂಡತಿಯನ್ನು ಸಂತೋಷದಲ್ಲಿರಿಸಬೇಕೆಂದು ಗಂಡನ ಬಯಕೆ. ಗಂಡನ ಜೀವವೇ ಹೆಂಡತಿಯ ಜೀವ; ಹೆಂಡತಿಯ ಜೀವವೇ ಗಂಡನ ಜೀವ.

ಒಂದು ಸಲ—ತಮಾಷೆ ನೋಡು!—ಶ್ರೀಪತಿಯೂ ನಾನೂ ಸೇರಿ ಕೆರೆಗೆ ಸ್ನಾನಕ್ಕೆಂದು ಹೋದೆವು "ಈಸಲು ಕಲಿಸುವೆನು ಬನ್ನಿ" ಎಂದು ಹತ್ತಿಪ್ಪತ್ತು ಹುಡುಗರನ್ನು ಶ್ರೀಪತಿ ಜೊತೆಗೆ ಕರೆದುಕೊಂಡಿದ್ದ. ಒಬ್ಬೊ ಬ್ಬರನ್ನೇ ಕೆರೆಯಲ್ಲಿ ಬಿಟ್ಟು ಎಲ್ಲರಿಗೂ ಈಸುವ ಬಗೆಯನ್ನು ಕಲಿಸಿಕೊಟ್ಟ. ಬಳಿಕ ನಮ್ಮ ಸ್ನಾನ-ಸಂಧ್ಯಾವಂದನೆಗಳು ಮುಗಿಯಬೇಕಾದರೆ ಮೂರು ನಾಲ್ಕು ಗಂಟೆಗಳ ಕಾಲಬೇಕಾಯಿತು. ಇನ್ನು ಮನೆಗೆ ಹೊರಡುವವರು; ಅಷ್ಟರಲ್ಲಿ ಕೆರೆಯ ಪಾವಟಿಗೆಯ ಮೇಲೆ ಗೌರಿಯ ತಾಯಿ ನಿಂತುದು ಕಂಡು ಬಂದಿತು. ಆಕೆಯ ಹಿಂದೆಯೇ ಗೌರಿ. ಮುಖವು ಬಾಡಿ ಬತ್ತಿಯಾಗಿದ್ದಿತು. ಕಣ್ಣಲ್ಲಿ ನೀರು ತುಳುಕುತ್ತಿದ್ದಿತು ಶ್ರೀಪತಿ ನೋಡಿದ; ಗಾಬರಿಯಾಗಿ ಕೇಳಿದ: "ಇದೇನಮ್ಮಾ! ಇಲ್ಲಿಗೆ ಬಂದಿರಿ!" ಶ್ರೀಪತಿಯನ್ನು ನೋಡಿ ದೊಡನೆಯೇ ಗೌರಿಯ ಮೊಗದಲ್ಲಿ ಮುಗುಳುನಗೆ ಮೂಡಿತು. ನಾಚಿದವ ಳಂತಾಗಿ ಮುಖ ತಗ್ಗಿಸಿ ನಿಂತಳು. ತಾಯಿ ಹಂಗಿಸುವ ದನಿಯಲ್ಲಿ ಮಾತ

ನಾಡಿದಳು: "ಸರಿಯಪ್ಪಾ! ರಾಜ್ಯಕ್ಕೆ ಹೊರತಾದ ಗಂಡ-ಹೆಂಡಿರು ನೀವು. ಕೆರೆಗೆ ನೀನು ಬಂದು ಹೆಚ್ಚು ಹೊತ್ತಾಯಿತು. ಮನೆಯಲ್ಲಿ ಗೌರಿಯು ಚಿಂತೆಗೆ ಆರಂಭವಾಯಿತು. ಇನ್ನಿಷ್ಟು ಹೊತ್ತಾಗಲು ಅಳುವುದಕ್ಕೆ ಮೊದಲಾಯಿತು. 'ಅಲ್ಲಿಗೆ ಹೋಗಿ ನೋಡಿಯಾದರೂ ಬರೋಣ ನಡೆ' ಎಂದು ಗಂಟುಬಿದ್ದಳು 'ಈಗ ಬರಬಹುದು. ತಾಳಮ್ಮಾ!' ಎಂದು ನಾನೆಷ್ಟು ಸಮಾಧಾನ ಹೇಳಿದರೂ ಕೇಳಲಿಲ್ಲ. ಇವಳಿಗಾಗಿ ನಾನು ಕೂಡ ಈ ಉರಿಬಿಸಿಲಲ್ಲಿ ಬರಿಗಾಲಿನಿಂದ ಎರಡು ಮೈಲು ನೆಲ ನಡೆದು ಬರಬೇಕಾಯಿತು."

ಶ್ರೀಪತಿಯು ನಗೆಗಣ್ಣಿನಿಂದ ಗೌರಿಯನ್ನು ನೋಡುತ್ತ ಕಿರುನಗೆ ನಗುತ್ತ "ಒಳ್ಳೇ ಚೆನ್ನಾಗಿದೆ." ಎಂದು ನುಡಿದ. ಎಲ್ಲರೂ ಸೇರಿ ಮನೆಗೆ ಬಂದೆವು. ಇಂತಹ ತಮಾಷೆಗಳು ಅವರ ಸಂಸಾರದಲ್ಲಿ ಆಗಾಗ ಘಟಿಸುತ್ತಿದ್ದುವು. ಶ್ರೀಪತಿಯ ಸಹವಾಸದಿಂದ ಗೌರಿಗೆ ಓದು ಬರೆಹದ ಪರಿಚಯವೂ ಆಯಿತು. ಸಂಗೀತದ ಅಭ್ಯಾಸವೂ ಕೆಲಮಟ್ಟಿಗೆ ಆಯಿತು.

ಒಳ್ಳೆಯ ಅಳಿಯ ದೊರೆತನೆಂದು ತಾಯಿಗೆ ಹಿಗ್ಗು; ಒಳ್ಳೆಯ ಗಂಡ ದೊರೆತನೆಂದು ಗೌರಿಗೆ ಹಿಗ್ಗು; ಒಳ್ಳೆಯ ಹೆಂಡತಿಯನ್ನು ಹೊಂದಿದೆನೆಂದು ಶ್ರೀಪತಿಗೆ ಹಿಗ್ಗು. ಹೀಗೆ ಆ ಮೂವರೂ ಹಿಗ್ಗಿನ ಕಡಲಲ್ಲಿ ತೇಲಾಡುತ್ತ ನಡೆದಿದ್ದರು. ಆ ತಾಯಿಮಕ್ಕಳಿಬ್ಬರೂ ತಮ್ಮ ಕಳೆದ ದಿನದ ಅಳಲಿನ ಬಾಳನ್ನು ಒಂದು ಕನಸಿನ ನೋಟವೆಂದು ಭಾವಿಸಿದರು.

ಮದುವೆಯಾಗಿ ಎರಡು ವರುಷಗಳಾದುವು. ಗೌರಿಗೆ ಮೂರು ತಿಂಗಳ ಬಸಿರು; ಇದರಿಂದಂತೂ ಮುದುಕಿಗೆ ಮುಗಿಲು ಮೂರೇ ಬೆರಳು ಉಳಿದಂತಾಯಿತು. ಕಿಟ್ಟಣ್ಣಾ! ದೈವದ ಆಟವನ್ನು ಕಂಡವರಾರು? ಇದ್ದುದಿದ್ದ ಹಾಗೆಯೇ ಶ್ರೀಪತಿಗೆ ಜ್ವರಬಂದಿತು; ವಿಷಮಜ್ವರವೆಂದು ಪಂಡಿತರು ಹೇಳಿದರು ಔಷಧೋಪಚಾರ ನಡೆಯಿತು ಆ ಮಗಳು-ತಾಯಿ, ಶ್ರೀಪತಿಗೆ ಮಾಡಿದ ಆರಯ್ಕೆಯು ಬೆರಳುಕಚ್ಚುವಂತಹದು. ನಿದ್ದೆಯಿಲ್ಲ, ನೀರಡಿಕೆಯಿಲ್ಲ; ಹಗಲೂ ಇರುಳೂ ಶ್ರೀಪತಿಯ ಉಪಚಾರಕ್ಕೆ ಸಿದ್ಧರಾಗಿ ಕುಳಿತೇ ಇರುವರು. ಆದರೆ ಯಾರ ಕೈಯಲ್ಲೇನಿದೆ. ಮೊನ್ನೆ ತ್ರಯೋದಶಿಯ ದಿವಸ ಶ್ರೀಪತಿಯ ಬಾಳಿನ ನೂಲು ಕತ್ತರಿಸಿತು. ತಾಯಿಮಕ್ಕಳು ಮತ್ತೆ ಅಳಲಿನ ಹೊಳೆಯ ಸೆಳವಿಗೆ ಸಿಕ್ಕಿಕೊಂಡರು. ಅಂದಿನ ಆ ತಾಯಿ-ಮಕ್ಕಳ ಗೋಳಾಟವನ್ನು ಕಂಡರೆ, ಎಂತಹ ಕಲ್ಲೆದೆಯೂ ಕರಗಿ ನೀರಾಗಬೇಕು.

ಆ ದಿನದ ಇರುಳು ಕಳೆದು ಬೆಳಗು ಬರುವುದರಲ್ಲಿಯೆ ಈ ಮಗಳು ಮನೆಯಿಂದ ಮಾಯವಾಗಿಬಿಟ್ಟಿದ್ದಳು. ಇದರಿಂದಂತೂ ತಾಯಿಗೆ ಗಾಯದ ಮೇಲೆ ಬರೆಯೆಳೆದಂತಾಯಿತು. ಅಳಿಯನ ಸಾವು, ಮಗಳ ಅಗಲಿಕೆ ಇವುಗಳಿಂದ ಆ ಮುದುಕಿ ಬಾಯಿಬಾಯಿ ಬಿಡುತ್ತ, ಅರಿವಿಲ್ಲದೆ ಹಾಗೆಯೇ ಮನೆಯಲ್ಲಿ ಬಿದ್ದುಕೊಂಡಿದ್ದಾಳೆ. "ಗೌರಿ, ಗೌರಿ!" ಎಂದು ಯಾವಾಗಲೂ ಕನವರಿಸುತ್ತಲೆ ಇದ್ದಾಳೆ. ಕೂಳಿಲ್ಲ, ನೀರಿಲ್ಲ! ಆಳುಗಳನ್ನಟ್ಟಿ ಅತ್ತಿತ್ತ ಹುಡುಕಾಡಿಸಿದೆವು. ಎರಡು ದಿನಗಳಾದರೂ ಗೌರಿಯ ಸುಳಿವೇ ಸಿಕ್ಕಲಿಲ್ಲ. ಪಾಪ! ಇಲ್ಲಿಗೆ ಹೇಗೆ ಬಂದಿರುವಳೋ ಏನೋ! ದುಃಖದ ಏಟು ಮೆದುಳಿಗೆ ಬಲವಾಗಿ ತಗುಲಿದೆ. ಉನ್ಮಾದಿನಿಯಾಗಿ ದಾರಿಸಿಕ್ಕತ್ತ ಓಡಿಬಂದಿದ್ದಾಳೆ, ಆಯಿತು."

ಇದಿಷ್ಟು ಹೇಳಿ ಸುಬ್ಬರಾಯರು, ಕಣ್ಣಲ್ಲಿ ತುಂಬಿದ್ದ ಕಂಬನಿ ಮಿಡಿದೊಗೆದರು. ಅವರು ಹೇಳಿದುದನ್ನೆಲ್ಲ ಕೇಳಿ ನನ್ನ ಕರುಳಿಗೆ ಮುಳ್ಳುಚುಚ್ಚಿದಂತೆ ನೋವಾಯಿತು. ಸುಬ್ಬರಾಯರು ಮತ್ತೆ ಮಾತನಾಡಲು ತೊಡಗಿದರು.

"ಪಾಪ! ಮುದುಕಿ ಅಲ್ಲಿ ಹಲುಬುತ್ತ ಬಿದ್ದಿದೆ. ಮಗಳ ಮುಖವನ್ನು ನೋಡಿ ಅದಕ್ಕೂ ಕೊಂಚ ಸಮಾಧಾನವಾದೀತು. ಹೇಗಾದರೂ ಮಾಡಿ, ನಾಳೆಗೆ ನಾವು ಹೋಗುವಾಗ ಗೌರಿಯನ್ನೂ ಜೊತೆಗೆ ಕರೆದುಕೊಂಡು ಹೊರಡೋಣ! ಅದುವರೆಗೆ ಮಗಳು ಜೀವದಿಂದಿದ್ದಾಳೆಂಬ ಸುದ್ದಿಯಾದರೂ ಮುದುಕಿಗೆ ಗೊತ್ತಾಗುವಂತೆ, ಇಂದೆಯೇ ನಮ್ಮೂರಿಗೊಂದು ಆಳನ್ನು ಕಳುಹಿಸಬೇಕು."

ಈ ಮಾತನ್ನು ಹೇಳಿ ಮುಗಿಸುತ್ತಿರುವಾಗಲೆ ಊಟಕ್ಕೇಳಿರೆಂದು ಅಮ್ಮನ ಆದೇಶವು ಬಂದಿತು. ಇಬ್ಬರೂ ಎದ್ದು ಊಟಕ್ಕೆ ಕುಳಿತೆವು. ಸುಬ್ಬರಾಯರು ಬಂದುದರಿಂದ ಇಂದು ಸವಿಯೂಟದಡಿಗೆ; ಆದರೇನು! ಮನಸು ಸರಿಯಾಗಿದ್ದರೆ ಎಲ್ಲ ಊಟ-ಉಡಿಗೆ!! ಹೇಗೆ ಹೇಗೋ ತಟ್ಟೆಯಲ್ಲಿದ್ದುದನ್ನು ಹೊಟ್ಟೆಯಲ್ಲಿ ತುಂಬಿಕೊಂಡು ಎದ್ದುಬಿಟ್ಟೆವು. "ಇದೇನು ಊಟ?" ಎಂದು ನಮ್ಮ ತಾಯಿ ಮತ್ತೆ ರೇಗಿದಳು.

ಊಟವಾದ ಬಳಿಕ ಕೊಂಚ ವೇಳೆ ಇಬ್ಬರೂ ಅಡ್ಡಾಗಿದ್ದೆವು. ಮೂರು ಗಂಟೆ ಹೊಡೆದ ಶಬ್ದವನ್ನು ಕೇಳಿ ಎದ್ದು ಕುಳಿತೆ. ಕೂಡಲೆ ಸುಬ್ಬರಾಯರೂ

ಎದ್ದರು. ಅವರ ಹೇಳಿಕೆಯಂತೆ ನಮ್ಮ ಆಳು ಮರಿಯಪ್ಪನನ್ನು ಕರೆಯಿ
ಸಿದೆ. ಸುಬ್ಬರಾಯರು ತಮ್ಮ ತಮ್ಮನ ಹೆಸರಿಗೆ ಕಾಗದ ಬರೆದರು. ಅದರಲ್ಲಿ
"ಗೌರಮ್ಮ ಇಲ್ಲಿ ಇದ್ದಾಳೆ. ನಾಳೆಗೆ ನಾನು ಬರುವಾಗ ಅವಳನ್ನೂ
ಜೊತೆಗೆ ಕರೆದುಕೊಂಡು ಬರುತ್ತೇನೆ. ಈ ಮಾತನ್ನು ಗೌರಮ್ಮನ ತಾಯಿಗೆ
ಕೂಡಲೆ ತಿಳುಹಿಸು." ಎಂಬ ಅಭಿಪ್ರಾಯವಿದ್ದಿತು.

ಬರೆದ ಕಾಗದವನ್ನು ಮಡಿಸಿ ಸುಬ್ಬರಾಯರು ಮೇಲೆ ಹೆಸರು ಬರೆ
ಯುತ್ತಿದ್ದರು. ಮಡಿನೀರಿನ ಬಿಂದಿಗೆ ತೆಗೆದುಕೊಂಡು ನದಿಯಿಂದ ನಮ
ತಾಯಿ ಬಂದಳು. ಆಕೆ ಒಳಕ್ಕೆ ಬರುತ್ತಿರುವಾಗಲೆ ಕೂಗಿ ಹೇಳಿದಳು:
"ಅಯ್ಯೋ! ಕಿಟ್ಟಾ! ಆ ಹುಚ್ಚಿ ಪಾಪ! ಹೊಳೆಯಲ್ಲಿ ಬಿದ್ದು ಬಿಟ್ಟಿತ
ನೋಡು."

ನಾನು ಮೆಟ್ಟಿಬಿದ್ದು ಕೇಳಿದೆ: "ಯಾವ ಹುಚ್ಚಿಯಮ್ಮಾ!"

ತಾಯಿ ಹೇಳಿದಳು: "ಇನ್ನಾವ ಹುಚ್ಚಿ? ಆ ಹನುಮನ ಗುಡಿಯ
ಮುಂದೆ ಕುಳಿತಿದ್ದಿತಲ್ಲಾ! ಅದು."

"ಅವಳೇ........?" ಎಂದು ಸುಬ್ಬರಾಯರು–ನಾನು ಕೂಡಿಯೆ
ಕೇಳಿದೆವು.

ತಾಯಿ ಹೇಳಿದಳು: "ಅಹುದು ಅವಳೇ! ನೋಡು, ನದಿಯ
ಮೆಟ್ಟಿಲುಗಟ್ಟೆಯ ಮೇಲೆ ಬರೀ ಹೆಂಗಸರೇ ನಾವೆಲ್ಲ ಇದ್ದೆವು. ಬಲಗಡೆಯ
ಬುರುಜಿನ ಮೇಲೆ ಆ ಹುಚ್ಚಿ ಕುಳಿತಿದ್ದಳು. ಕಣ್ಣೆವೆಯಿಕ್ಕದೆ ನದಿಯ
ಪ್ರವಾಹವನ್ನು ನೋಡಿಯೇ ನೋಡುತ್ತಿದ್ದಳು. ಅವಳು ಹಾಗೆ ನೋಡು
ತ್ತಿರುವುದು ನಮಗೆ ತಮಾಷೆಯೆನಿಸಿತು. ನಮ್ಮನಮ್ಮೊಳಗೆ ಮಾತ
ನಾಡುತ್ತ, ನಗುತ್ತ, ಆ ಹುಚ್ಚಿಯ ಆಟವನ್ನೆಲ್ಲ ನೋಡುತ್ತ ನಿಂತಿದ್ದೆವು.
ಹುಚ್ಚಿ ತಟ್ಟನೆ ಎದ್ದು ನಿಂತಳು. ಹೊಳೆಯ ಕಡೆಗೆ ಕೈಮಾಡಿದಳು:
"ಅದೋ....ಅಲ್ಲಿ....ಅಲೆಗಳ ಸಾಲಿನಲ್ಲಿ....ಅವರು ಕುಳಿತು ನಡೆದಿದ್ದಾರೆ....
ನಾನೂ ಬರುತ್ತೇನೆ, ನಿಲ್ಲಿ ನಿಲ್ಲಿ...." ಎಂದು ನುಡಿದು, ಹಿಂದೆ ಮುಂದೆ
ನೋಡದೆ, ತುಂಬಿ ಹರಿಯುವ ಹೊಳೆಯಲ್ಲಿ ಹಾರಿಬಿಟ್ಟಳು. ಈಸಬಲ್ಲ ಗಂಡಸ
ರಾರೂ ಸಮೀಪದಲ್ಲಿ ಇರಲೇ ಇಲ್ಲ. ಪಾಪ! ಸೆಳವಿಗೆ ಸಿಕ್ಕು ಹರಿದು
ಹೋಯಿತು." ಇದನ್ನು ಹೇಳುತ್ತಿರುವಾಗ ನಮ್ಮ ತಾಯಿಯ ಕೊರಳು
ಬಿಗಿದು ಬಂದಿತು.

ತಾಯಿಯ ಮಾತನ್ನು ಕೇಳಿದೆನು; ಎದೆಯಲ್ಲಿ ಬೇಳೆ ಬೇಯಿಸಿದಂತಾಯಿತು. ಸುಬ್ಬರಾಯರ ಕಡೆಗೆ ನೋಡಿದೆ; ಮರುಳುಹಿಡಿದವರಂತಾಗಿ ದಿಂಬಿಗೆ ಒರಗಿ ಕುಳಿತಿದ್ದರು. ಬಾಯಿಂದ ಮಾತುಗಳೆ ಬರಲೊಲ್ಲವು. ಕಂಬನಿಗಳು ತುಂಬಿತುಳುಕುತ್ತಿದ್ದುವು. ನಾನೂ ಸುಮ್ಮನೆ ಕುಳಿತುಕೊಂಡೆ.

ಕೊಂಚ ಸಮಯ ಹೀಗೆಯೆ ಕಳೆದು ಹೋಯಿತು. ಸುಬ್ಬರಾಯರು ಬಿಸಿಯಾದ ಉಸಿರೊಂದನ್ನು ಬಿಟ್ಟು ಮಾತನಾಡಿದರು: "ಕಿಟ್ಟಣ್ಣಾ! ಗೌರಿಯೆಂದರೆ ಅದೊಂದು ಹೂ! ಅದರ ಪರಿಮಳವು ಲೋಕಕ್ಕೆ ಬಹಳ ಕಾಲದವರೆಗೆ ದೊರೆಯಲಿಲ್ಲ! ಆ ಹೂವಿನ ಹಗಲು ಇಂದಿಗೆ ಮುಗಿಯಿತು! ಹೂವು ಬಾಡಿಬಿದ್ದು ಹುಡಿಗೂಡಿ ಹೋಯಿತು! ಆತನ ಇಚ್ಛೆ."

ಅಕ್ಟೋಬರ್ ೧೯೩೦

---

# ಆ ಹೆಂಗುಸು

ಸಂಸ್ಕೃತ ಸುಭಾಷಿತಕಾರನೊಬ್ಬನು "ಧನ್ಯೋ ಗೃಹಸ್ಥಾಶ್ರಮಃ" ಎಂದು ಸಾರಿ ಸಾರಿ ಹೇಳಿದ್ದಾನೆ. ಆನಂದದ ಆಗರವಾಗಿದ್ದ ಮನೆ, ಮನೆಯ ತುಂಬ ಕಾಳುಕಡಿ ಹಣಹೊನ್ನುಗಳು, ಮತಿವಂತರಾದ ಮಕ್ಕಳು, ನಗೆಮೊಗದ-ಮೆಲುಮಾತಿನ-ಮಡದಿ, ಕೆಲಸಕ್ಕೆ ಕೈಕಟ್ಟಿ ನಿಂತ ಊಳಿಗದಾಳುಗಳು, ಒಲವನ್ನು ಬಯಸುತ್ತಿರುವ ಸ್ನೇಹಿತರು ಇವೇ ಮೊದಲಾದ ಎಲ್ಲ ಮಾತುಗಳು ಹೊಂದಿಕೆಯಾಗಿರುವ, ಅದಾವುದೋ ಒಂದು ಸಂಸಾರವನ್ನು ನೋಡಿದ್ದಾನೆ–ಆ ಸುಭಾಷಿತಕಾರ; 'ಧನ್ಯೋ ಗೃಹಸ್ಥಾಶ್ರಮಃ' ಎಂದು ಹಿಗ್ಗಿನ ಭರದಲ್ಲಿ ಕೂಗಿ ಬಿಟ್ಟಿದ್ದಾನೆ ಆಯಿತು. ಪ್ರಪಂಚದಲ್ಲಿ ಎಲ್ಲ ಬಗೆಗಳಿಂದಲೂ ಅನುಕೂಲವಾಗಿರುವ ಸಂಸಾರಗಳು ಲಕ್ಷಕ್ಕೊಂದಾದರೂ ಸಿಕ್ಕಬಹುದೇ! ಎಲ್ಲೆಲ್ಲಿಯೂ ಒಂದೊಂದು ಬಗೆಯ ಒದ್ದಾಟದ ಬಾಳೇ ಕಂಡುಬರುವುದು.

ಗೃಹಸ್ಥಾಶ್ರಮದ ಮೇಲ್ಮೆಯನ್ನು ಕೊಂಡಾಡಿದ ಆ ಸುಭಾಷಿತಕಾರ, ನಮ್ಮ ಮನೆಗೆ ಬಂದು, ಎರಡೇ ಎರಡು ನಿಮಿಷ ಕುಳಿತು ನೋಡಿದ್ದರೆ ಏನೆಂದು ಹೇಳುತ್ತಿದ್ದನೋ ಕಾಣೆ. ನೋವನ್ನು ತಾಳದೆ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದ ನನ್ನ ಹೆಂಡತಿಯ ನರಳಾಟ, ತಾಯಿಯ ಹಾಲಿಲ್ಲದೆ ಹಸಿದು ಕಂಗೆಟ್ಟು ಅಳುತ್ತಿರುವ ಎಳಮಗುವಿನ ಒರಲಾಟ, ಮನೆಗೆಲಸ ಮಾಡಿಮಾಡಿ ಬೇಸತ್ತು ಸಂತಾಪಗೊಂಡು, ಕಂಡವರ ಮೇಲೆ ಹರಿಹಾಯು ತ್ತಿರುವ ನಮ್ಮ ತಾಯಿಯ ಕಿರುಚಾಟ, ಇವೆಲ್ಲವನ್ನೂ ಆತ ನಸುವೇಳೆ ನೋಡಿದ್ದರೆ— ಕೇಳಿದ್ದರೆ— "ಧಿಗ್ ಧಿಗ್ ಗೃಹಸ್ಥಾಶ್ರಮಃ'' ಎಂದು ಕೂಗುತ್ತ, ಅಂದೇ-ಆಗಲೆ-ಕಾಡಿಗೆ ಓಡಿ ಹೋಗಿಬಿಡುತ್ತಿದ್ದನೆಂದು ನನ್ನ ಖಂಡಿತವಾದ ನಂಬುಗೆ.

ನಮ್ಮ ಕನ್ನಡ ಕವಿ-ಸರ್ವಜ್ಞ-ಕೂಡ "ಬೆಚ್ಚನ್ನ ಮನೆಯಾಗೆ, ವೆಚ್ಚಕ್ಕೆ ಹೊನ್ನಾಗೆ, ಇಚ್ಛೆಯನರಿವ ಸತಿಯಾಗೆ, ಸ್ವರ್ಗಕ್ಕೆ ಕಿಚ್ಚು ಹಚ್ಚು'' ಎಂದು ಹೇಳಿಬಿಟ್ಟಿದ್ದಾನೆ. ಹೇಳಿ ಕೇಳಿ ಸನ್ಯಾಸಿಯಾತ; ಗೃಹಸ್ಥಾಶ್ರಮದ ಸುಖದುಃಖದ ಸಮಾಚಾರ ಅವನಿಗೇನು ಗೊತ್ತು? ಏನೋ ಕಲ್ಪನೆಯಿಂದ ಕೆಲವು ಮಾತುಗಳನ್ನು ಕೂಡಿಸಿ ಹೇಳಿದ್ದಾನೆ ಆಯಿತು. ನೋಡಿ! ಸರ್ವಜ್ಞ ಹೇಳಿದ ಅನುಕೂಲತೆ ಎಲ್ಲವೂ ನನಗಿದೆ. ಬೇಕಾದಂತಹ ಬಿರುಮಳೆ ಬಂದರೂ ಬೆದರದಂತಹ ಕಲ್ಲುಗಚ್ಚಿನ ಮನೆಯಿದೆ. ಸಿರಿವಂತನೆಂದು ಕರೆಯಿಸಿಕೊಳ್ಳುವಂತಿರದಿದ್ದರೂ ಹೊಟ್ಟೆಬಟ್ಟೆಗೆ ಕೊರತೆ ಬರದಷ್ಟು ಆರ್ಥಿಕ ಅನುಕೂಲತೆಯೂ ಇದೆ. ಇನ್ನು ಹೆಂಡತಿಯ ವಿಚಾರ; ಆಕೆ ನನ್ನ ಮಾತು ಮೀರಿ ನಡೆದುದನ್ನು ನಾನೆಂದೂ ಕಂಡಿಲ್ಲ. ಆಕೆಯ ಪ್ರಾರಬ್ಧವು ತಾಳಲಾರದಂತಹ ನೋವನ್ನು ತಂದೊಡ್ಡಿದೆ. ನರಳುತ್ತ ಬಿದ್ದು ಕೊಂಡಿದ್ದಾಳೆ. ಆಕೆಯದೇನು ತಪ್ಪು ಇದರಲ್ಲಿ? ಇಷ್ಟೆಲ್ಲ ನನಗಿದ್ದರೂ ಸರ್ವಜ್ಞನ ಹಾಗೆ "ಸ್ವರ್ಗಕ್ಕೆ ಕಿಚ್ಚು ಹಚ್ಚು'' ಎಂದು ತಣಿದ ಮನದಿಂದ ಖಂಡಿತವಾಗಿ ಹೇಳುವಂತಹ ಒಂದು ದಿನವನ್ನೂ ಕಂಡಿಲ್ಲವಲ್ಲ ನಾನು! ಇಷ್ಟೇ ಅಲ್ಲ "ದೇವಾ! ನನ್ನ ಮಟ್ಟಿಗೆ ನಾನು ಅದೆಷ್ಟು ದುಃಖವನ್ನಾದರೂ ಸಹಿಸಿಕೊಂಡಿರಬಲ್ಲೆ. ನಿನ್ನ ನರಕಕ್ಕೆ ಆದರೂ ಆಗಲಿ, ಬೇಗನೆ ಕರೆದು ಕೊಂಡು ಹೋಗಿಬಿಡು" ಎಂದು ಬೇಸತ್ತ ಮನದಿಂದ ಆಗಾಗ ಉಸಿರಿಡು ತ್ತಿರುವೆನು.

ನನ್ನ ತಾಯಿ ಮುಪ್ಪಿನ ಮುದುಕಿ. ಮಡಿ-ಮೈಲಿಗೆಯೆಂಬ ಇಲ್ಲದ ಭಾಂದಸತನವು ಅವಳಲ್ಲಿ ಮನೆಮಾಡಿಬಿಟ್ಟಿದೆ. ಇನ್ನೊಬ್ಬರು ಮಾಡಿದ ಕೆಲಸ ಒಪ್ಪಿಗೆಯಾಗದು. ಆದುದರಿಂದಲೆ ಮನೆಯ ಕೆಲಸದ ಬಹುಭಾಗದ ಹೊರೆಯೆಲ್ಲ ಆಕೆಯ ತಲೆಯಮೇಲೆಯೆ. ಬೇಡಬೇಡವೆಂದು ಅದೆಷ್ಟು ಹೇಳಿದರೂ ಬೇನೆಯವಳ ಆರೈಕೆಯಲ್ಲಿಯೂ ಭಾಗತೆಗೆದುಕೊಳ್ಳುವಳು. ಮೊದಲೇ ಮುಪ್ಪು, ಅದರಲ್ಲಿ ಮನೆಗೆಲಸದ ಗಲಾಟೆ ಬೇರೆ. ಇದರಿಂದ ಮನೆಯಲ್ಲಿ ಯಾವುದು ಇದೆ ಯಾವುದು ಇಲ್ಲ....ಎಂಬುದರ ಜ್ಞಾಪಕವೇ ಆಕೆಗಿರದು. ಅಡಿಗೆ ಮಾಡುತ್ತಿರುವಾಗ ಒಗ್ಗರಣೆಗಾಗಿ ಒಲೆಯಲ್ಲಿ ಸವುಟನ್ನು ಕಾಯಹಾಕುವಳು; ಎಣ್ಣೆ ಇಲ್ಲದುದನ್ನು ನೋಡುವಳು. ಸರಿ! "ಎಣ್ಣೆ ತೀರಿದೆಯಲ್ಲವೋ ಕಿಟ್ಟಾ!" ಎಂದು ಕುಳಿತಲ್ಲಿಂದಲೇ ಕೂಗಿಡುವಳು. ಅಳುತ್ತಿರುವ ಮಗುವನ್ನು ಬಿಟ್ಟೋ, ಕೈಯಲ್ಲಿದ್ದ ಕೆಲಸವನ್ನು ಬಿಟ್ಟೋ, ಓಡಿಹೋಗಬೇಕು ಪೇಟೆಗೆ. ಎಣ್ಣೆ ತೆಗೆದುಕೊಂಡು ಬರುವುದರೊಳಗಾಗಿಯೆ ಮನೆಯಲ್ಲಿ ಉಪ್ಪಿಲ್ಲವೆಂಬುದು ತಾಯಿಗೆ ತಿಳಿಯುವುದು. "ಅಯ್ಯೋ ನನ್ನ ಮರೆವಿಗೆ ಮಣ್ಣು ಹಾಕಾ! ಕಿಟ್ಟಾ, ನಿನಗೆ ಆಗಲೆ ಹೇಳಲಿಕ್ಕೆ ಮರೆತೆನಪ್ಪಾ! ಉಪ್ಪು ಬಳಿದು ಬಿಟ್ಟಿದೆಯಲ್ಲೋ!" ಎಂಬ ತಾಯಿಯ ಮಾತು ಕಿವಿಗೆ ಬೀಳುವುದು. ಮತ್ತೇನಿದೆ, ಪುನಃ ಹೋಗಬೇಕು ಪೇಟೆಗೆ! ಹಾಳು! ಆ ಪೇಟೆಯಾದರೂ ಹತ್ತಿರವಿದೆಯೆಂದು ಹೇಳಬೇಕೆ! ಅರ್ಧಮೈಲಿಯಷ್ಟು ದೂರ ಹೋಗಬೇಕು. ಎಷ್ಟೋ ಸಲ ಎಲೆಯ ಮೇಲೆ ಅನ್ನಹಾಕಿ ತುಪ್ಪಬಡಿಸುತ್ತಿರುವಾಗಲೆ ತುಪ್ಪವಿಲ್ಲವೆಂಬುದು ತಿಳಿಯುವುದು. ಆಗೇನು ಮಾಡಬೇಕು! ಪೇಟೆಗೆ ಹೋಗಿ ತರಬೇಕು ಒಂದು; ಇಲ್ಲದೆ ಇದ್ದರೆ ತುಪ್ಪವಿಲ್ಲದೆ ಹಾಗೆಯೇ ಉಣ್ಣಬೇಕು ಒಂದು ನಾನೆಲ್ಲ ಹಾಗೆಯೇ ಉಂಡು ಎದ್ದುಬಿಡುವವನೆ; ಆದರೆ ನಾನು ತುಪ್ಪವಿಲ್ಲದೆ ಉಂಡರೆ ತಾಯಿಗೆ ತಡೆಯಲಾರದಷ್ಟು ವ್ಯಸನ. ಕಣ್ಣು ತುಂಬ ಕಂಬನಿಗಳು. ನನ್ನ ಜೀವನದಲ್ಲಿ ಮನೆಯಿಂದ ಪೇಟೆಗೆ ಪೇಟೆಯಿಂದ ಮನೆಗೆ ಹತ್ತು ಹತ್ತು ಸಲ ಅಲೆದಾಡಿದ ದಿನಗಳು ಅದೆಷ್ಟೋ ಇವೆ.

ನನ್ನ ತಾಯಿಯ ದೋಷವನ್ನು ಎತ್ತಿ ಆಡುತ್ತಿರುವೆನೆಂದು ಯಾರೂ ಭಾವಿಸಲಾಗದು. ಏನೋ ನನ್ನ ಪಡುಪಾಟವನ್ನು ಹೇಳುತ್ತಿರುವಾಗ ಮಾತಿಗೆ ಮಾತು ಹೊರಟು, ಈ ಸಂಗತಿಯನ್ನೆತ್ತಬೇಕಾಯಿತು ಇಷ್ಟೇ! ನನಗೆ

ಕಷ್ಟ ಕೊಡಬೇಕೆಂದೇನು ನಮ್ಮ ತಾಯಿಗೆ ಇಷ್ಟವೇ? ಮುಪ್ಪಿನ ಕಾಲ, ಮರೆಗುಳಿತನದಿಂದ ಹೀಗೆ ಆಗುತ್ತಿರುವುದು. ಪಾಪ, ಅವಳದೇನು ತಪ್ಪು! ತನ್ನ ಮರೆಗುಳಿತನಕ್ಕಾಗಿ ತನ್ನನ್ನು ತಾನೇ ಬೈದುಕೊಳ್ಳುತ್ತಿರುವುದು ದಿನ ದಿನ ನಡೆದೇ ಇರುವುದು.

ನೋವು ಕೊಂಚ ಕಡಿಮೆಯಿದ್ದಾಗ, ಹೆಂಡತಿ ಸಮಾಧಾನದಿಂದ ಒಂದೆ ರಡು ನಲ್ಮಾತುಗಳನ್ನಾಡುವಳು. ಅಳುತ್ತಿರುವ ಮಗುವನ್ನು ಆಡಿಸಿ ಸಂತ ವಿಡುತ್ತಿರುವಾಗ, ಮಲ್ಲಿಗೆಯರಳಿನಂತಹ ಕಣ್ಣುಗಳಿಂದ ನನ್ನನ್ನು ನೋಡಿ, ಅದು ಮುಗುಳುನಗೆ ನಗುವುದು. ಬಳಲಿಕೆ ಬೇಸರುಗಳು ಕಳೆದು ಹೋದಾಗ, ತಾಯಿ ನನ್ನೊಡನೆ ಎದೆಯನ್ನು ಹಿಗ್ಗಿಸಿಬಿಡುವಂತಹ ನಾಲ್ಕು ಅಂತಃಕರ ಣದ ಮಾತುಗಳನ್ನಾಡುವಳು. ಆಗಷ್ಟು ಮಾತ್ರ-ಕಾರ್ಮೋಡದಲ್ಲಿ ಮಿಂಚು ತೋರಿ ಮರೆಯಾದಂತೆ-ಕೊಂಚಕಾಲ ಸಂಸಾರದ ಸವಿಯು ರುಚಿ ಯನ್ನು ನೋಡಿದಂತಾಗುವುದು. ಮನಸ್ಸಿನಲ್ಲಿ ಏನೇನೋ ಆಶೆಗಳು ಮೂಡು ವುವು. "ಸ್ವರ್ಗಕ್ಕೆ ಕಿಚ್ಚು ಹಚ್ಚು" ಎಂದು ಹೇಳುವ ಕಾಲ ನನಗೂ ಬರಬಹುದೇನೋ ಎಂದುಕೊಳ್ಳುವೆನು. ಈ ಆಶಾಜನಕವಾದ ಕೆಲವೊಂದು ಗಳಿಗೆಗಳ ಅನುಭವವು ನನಗಿರದಿದ್ದಲ್ಲಿ, ನಾನು ಅದೆಂದೋ ಈ ಸಂಸಾರ ದಿಂದ ಕಾಲುಗಳನ್ನು ಕೀಳುತ್ತಿದ್ದೆನೆಂದು ನನ್ನೆಣಿಕೆ. ನನ್ನ ತಾಯಿ ನನ್ನೊಡನೆ ಮನಸ್ಸು ಬಿಚ್ಚಿ ಮಾತನಾಡುತ್ತ ಕುಳಿತಾಗಲೆಲ್ಲ ನನಗೆ ಹಿಡಿಸಲಾರದಷ್ಟು ಹಿಗ್ಗು. ಆ ಹಿಗ್ಗಿನ ಭರದಲ್ಲಿ "ಮತ್ತೊಮ್ಮೆ ಮಗುವಾಗಿ ಈಕೆಯ ತೊಡೆಯ ಮೇಲೆ ಮಲಗಿಕೊಳ್ಳಲೇ?" ಎಂಬ ಹುಚ್ಚು ವಿಚಾರ ತಲೆ ಯಲ್ಲಿ ಬಂದುಬಿಡುತ್ತಿರುವುದು.

ನನ್ನ ಹೆಂಡತಿ ನಾಲ್ಕೈದು ತಿಂಗಳಿಂದ ಹಾಸಿಗೆ ಹಿಡಿದಿರುವಳು. ವಾತಪ್ರಕೋಪದಿಂದ ಮೈಯೆಲ್ಲವೂ ಶೂಲಿ. ಸಂದು ಸಂದುಗಳಲ್ಲಿ ವಿಪ ರೀತ ನೋವು. ಬಿದ್ದರೆ ಏಳಲಿಕ್ಕಾಗದು, ಎದ್ದರೆ ಬೀಳಲಿಕ್ಕಾಗದು. ಔಷ ಧೋಪಚಾರ ನಡೆದೇ ಇದೆ. ನಾನು ನಮ್ಮ ಆರ್ಯವೈದ್ಯಶಾಸ್ತ್ರದಲ್ಲಿ ತುಂಬ ನಂಬಿಗೆಯುಳ್ಳವನು. ಎಂತಲೆ ನಾಲ್ಕೈದು ಜನ ದೇಶೀಯ ವೈದ್ಯರಿಂದ ಚಿಕಿತ್ಸೆಮಾಡಿಸಿದೆ. ಯಾವುದರಿಂದಲೂ ಗುಣವು ಕಂಡುಬರಲಿಲ್ಲ ಕೊನೆಗೆ -ನಿರ್ವಾಹವಿಲ್ಲದೆ-ಇದನ್ನಷ್ಟು ಪರೀಕ್ಷೆಮಾಡಿ ಬಿಡೋಣವೆಂದು-ಡಾಕ್ಟ ರಿಗೆ ತೋರಿಸಿದೆ. ಅವರ ಚಿಕಿತ್ಸೆಯೆ ನಡೆದಿದೆಯೀಗ. ನಮ್ಮ ಹಿರಿಯರು

ಕುಂಠಿಬೆಲ್ಲದ ಔಷಧದಿಂದ ಎಂಟೆಂಟು ವರ್ಷದ ಘನರೋಗಗಳನ್ನು ಕಳೆದು ಬಿಡುತ್ತಿದ್ದರಂತೆ. ಈಗಲೋ, ಮೂರು ದಿನದ ವೈದ್ಯುಲಸಿಕೆಗೆ ನೂರು ನೂರು ರೂಪಾಯಿ ಸುರಿಯಬೇಕಾಗುತ್ತದೆ. ಔಷಧದ ವೆಚ್ಚಕ್ಕಿಂತಲೂ ಇನ್ನುಳಿದ ಸಾಹಿತ್ಯಗಳ ಸಾಮ್ರಾಜ್ಯದ ವೆಚ್ಚವೇ ಹೆಚ್ಚು ಬರುವುದು, ಮೂಗಿಗಿಂತ ಮೂಗುತಿ ಭಾರ—ಎಂಬಂತೆ. "ಎಲೆಕ್ಟ್ರಿಕ್ ಟ್ರೀಟ್‌ಮೆಂಟ್" ಅಂತೆ. ಅದಕ್ಕೆ ಬೇಕಾಗುವ ಸಲಕರಣೆಗಳನ್ನು ಒದಗಿಸಬೇಕಾದರೆ ಸಾಕುಬೇಕಾಗಿ ಹೋಯಿತು. ಹಣದ ಹೊಳೆಯನ್ನೇ ಹರಿಸಬೇಕಾಗಿ ಬಂದಿತು. "ರೋಗಿಗೆ ಸರಿಯಾಗಿ ಆರೈಕೆ ಮಾಡುವುದೆಂದರೆ ಮನೆಯವರಿಗೆ ಅದು ಸಾಧ್ಯವಿಲ್ಲ. ನೀವು 'ನರ್ಸ್' ಒಬ್ಬಾಕೆಯನ್ನು ಗೊತ್ತು ಮಾಡಿ ಬಿಡಿ." ಎಂದು ಡಾಕ್ಟರು ಹೇಳಿದರು. "ಆಗಲಿ" ಎಂದು ನಾನು ತಲೆದೂಗಿದೆ. ಕನಕಮ್ಮನೆಂಬ ಹೆಸರಿನ 'ನರ್ಸ್' ಒಬ್ಬಾಕೆ ನನ್ನ ಪರಿಚಯದವಳು. ಆಕೆಗೆ ನಮ್ಮ ಮನೆಗೆ ಬರುವಂತೆ ವಿನಂತಿ ಮಾಡಿಕೊಂಡೆ. ಕೈತುಂಬ ದುಡ್ಡು ಕೊಟ್ಟು ಕೆಲಸ ಮಾಡಿಸಿಕೊಳ್ಳಬೇಕಾಗಿದ್ದರೂ ವಿನಂತಿಯನ್ನೇನೋ ಮಾಡಿಕೊಳ್ಳಲೇ ಬೇಕು. ಆಕೆ ಗೌರವಯುಕ್ತವಾದ ಗಾಂಭೀರ್ಯದಿಂದ ಬರಲು ಒಪ್ಪಿಕೊಂಡಳು. ದಿನಾಲು ಬೆಳಗು-ಸಂಜೆಗಳಲ್ಲಿ ಮನೆಗೆ ಬಂದು, ರೋಗಿಗೆ ಮಾಡತಕ್ಕ ಆರಯ್ಕೆಯನ್ನೆಲ್ಲ ಸರಿಯಾಗಿ ಮಾಡಿ ಹೋಗುವಳು.

## ೨

ಬೆಳಗಿನ ಎಂಟುಗಂಟೆಯಾಗಿದ್ದಿತು. ನಾನು ಪ್ರಾತರ್ವಿಧಿಗಳನ್ನೆಲ್ಲ ಆಗ ತಾನೆ ತೀರಿಸಿಕೊಂಡು, ವೃತ್ತಪತ್ರವೊಂದನ್ನು ನೋಡುತ್ತ ನನ್ನ ಕಿರುಮನೆಯಲ್ಲಿ ಕುಳಿತಿದ್ದೆ. ಕನಕಮ್ಮನ ದನಿಯು ಕೇಳಿಸಿತು. ಕಿರುಮನೆಯನ್ನು ಬಿಟ್ಟು ಹೊರಕ್ಕೆ ಬಂದೆ ನೋಡಿದೆ. ಮೊದಲಿನ ಮೂರು ದಿನ ಕನಕಮ್ಮ ಒಬ್ಬಳೇ ಬರುತ್ತಿದ್ದಳು. ಇಂದು ಆಕೆಯ ಜೊತೆಯಲ್ಲಿ ಇನ್ನಾರೋ ಒಬ್ಬ ಹೆಂಗುಸು ಇದ್ದಳು. ಇಬ್ಬರನ್ನೂ ಆದರದಿಂದ ಬರಮಾಡಿಕೊಂಡೆ. ಕನಕಮ್ಮ ರೋಗಿಯ ಆರಯ್ಕೆಯಲ್ಲಿ ತೊಡಗಿದಳು. ಅವಳ ಜೊತೆಗಾತಿ ಅಲ್ಲಿಯೇ ಬಳಿಯಲ್ಲಿ ಕುಳಿತಳು. ನಾನೂ ಅಲ್ಲಿಯೇ ಒಂದು ಬದಿಗೆ ಕುಳಿತಿದ್ದೆ.

ಕನಕಮ್ಮನ ಜೊತೆಗೆ ಬಂದಿದ್ದ ಆ ಹೆಂಗುಸು ತಿಳಿನೀಲಿಬಣ್ಣದ ಪತ್ತಲ

ವೊಂದನ್ನು ಉಟ್ಟದ್ದಳು. ಮೈಯಲ್ಲಿ ಬಿಳಿಯ ಬಣ್ಣದ ರೌಕೆಯಿದ್ದಿತು. ಬಟ್ಟೆಗಳು ಅಷ್ಟೊಂದು ಬೆಲೆಬಾಳುವುವಲ್ಲವಾದರೂ ಅಚ್ಚುಕಟ್ಟಾಗಿದ್ದುವು. ಮುಂಗೈಗಳಲ್ಲಿ ಸಣ್ಣಗೆ ಇರುವ ಎರಡೆರಡು ಚಿನ್ನದ ಬಳೆಗಳು. ಕೊರಳಲ್ಲಿ ನಯವಾಗಿ ಕೆಲಸ ಮಾಡಿದ, ಒಂದೇಒಂದು-ಚಿನ್ನದ ಎರಡೆಳೆಯ-ಸರಪಣಿ. ಕಿವಿಯಲ್ಲಿ ತಳತಳನೆ ತೊಳಗುತ್ತಿರುವ ವಜ್ರದ ಬೆಂಡೋಲೆಗಳು. ನಮ್ಮ ಸನಾತನ ಧರ್ಮದವರು ಮಾಂಗಲ್ಯದ ಚಿಹ್ನವೆಂದು ತಿಳಿಯುತ್ತಿರುವ ಯಾವ ಒಡವೆಯೂ ಆಕೆಯ ಮೈಮೇಲೆ ಕಾಣುತ್ತಿರಲಿಲ್ಲ. ಕಪ್ಪಾಗಿ–ನೀಳವಾಗಿ ಇರುವ ತಲೆಗೂದಲುಗಳನ್ನು ಹೆಚ್ಚಾಗಿ ಬಾಚದೆ, ಹಾಗೆಯೆ ಓರಣವಾಗಿ ಕಟ್ಟಿದಂತೆ ಕಾಣುತ್ತಿದ್ದಿತು. ವಯಸ್ಸು ಮೂವತ್ತು ಮೂವತ್ತೆರಡಕ್ಕೆ ಮೀರಿರಲಾರದೆಂದು ನನ್ನ ಎಣಿಕೆ.

ಆ ಹೆಂಗುಸು ಚೆಲುವೆಯೂ ಆಗಿದ್ದಳು. ಒಳ್ಳೇ ಕೇತಕಿಯ ಗರಿಯಂತಹ ಮೈಬಣ್ಣ; ಕಿವಿಯ ಬೆಂಡೋಲೆಯ ಹರಳಿನ ಹೊಳಪನ್ನೂ ಹಿಂದೆ ಹಾಕಬಹುದಾಗಿದ್ದ ಕಳೆಯುಳ್ಳ ಕಣ್ಣುಗಳು; ಕುಲೀನತೆಯನ್ನೂ ಶಾಲೀನತೆಯನ್ನೂ ಸೂಚಿಸುವಂತಹ–ಗಾಂಭೀರ್ಯವು ತುಂಬಿದ್ದ-ಸ್ಥಿರ ದೃಷ್ಟಿ; ಇವೆಲ್ಲ ಮೊದಲನೆಯ ದರ್ಶನದಲ್ಲಿಯೇ ಎದೆಯ ಮೇಲೆ ಮೂಡಿಬಿಡುವಂತಹವು. ಆಕೆಯ ವೇಷಭೂಷಣಗಳನ್ನೆಲ್ಲ ನಾನು ಬೆರಗುಗಣ್ಣುಗಳಿಂದ ಎವೆಯಿಕ್ಕದೆ ನೋಡಿದೆನು. "ಈಕೆಯೂ ಒಬ್ಬ 'ನರ್ಸ್' ಇರಬಹುದೇನೊ! ಕ್ರೈಸ್ತಮತಕ್ಕೆ ಸೇರಿದವಳಾಗಿರಬಹುದು'' ಎಂದು ಭಾವಿಸಿದೆ. ಇದನ್ನೆಲ್ಲ ಮಾತಿನಲ್ಲಿ ಹೇಳಬೇಕಾದರೇನೋ ತಡೆಯೆನಿಸುವುದು. ನೋಟವೂ ಬಗೆಯೂ ತಮ್ಮ ತಮ್ಮ ಕೆಲಸವನ್ನು ಅದೆಷ್ಟು ಬೇಗನೆ ಮಾಡಿ ಮುಗಿಸಬಲ್ಲವೆಂಬುದನ್ನು ನಾನೇನು ಬೇರೆಯಾಗಿ ಹೇಳಬೇಕೇ?

ಕನಕಮ್ಮನು ತನ್ನ ಕಾಸುವ ಕಟ್ಟುವ ಕೆಲಸದಲ್ಲಿ ತೊಡಗಿಹೋಗಿದ್ದಳು. ನಾನು ಅಲ್ಲಿಯೇ ಕುಳಿತು ಕುತೂಹಲ ಭಾವದಿಂದ ಅದನ್ನೆಲ್ಲ ನೋಡುತ್ತಿದ್ದೆ. ಮಧ್ಯೆ ಮಧ್ಯೆ ಆ ಹೊಸಬಳ ಕಡೆಗೆ ಸಹಜವಾಗಿ ನನ್ನ ನೋಟ ಹೊರಳುತ್ತಿದ್ದಿತು. ನಾನೊಂದು ಆಶ್ಚರ್ಯವನ್ನು ನೋಡಿದೆ. ಆ ಹೆಂಗುಸು ಕಣ್ಣರೆಪ್ಪೆ ಅಲುಗಿಸದೆ, ನನ್ನಲ್ಲಿಯೇ ನೋಟವನ್ನು ನೆಲಸಿ ಕುಳಿತಿದ್ದಳು. ಆಕೆಗೆ ಇನ್ನಾವುದರ ಅರಿವೇ ಇದ್ದಂತೆ ತೋರಲಿಲ್ಲ. ಚಿತ್ರಕಾರನು ಚಿತ್ರಿಸತಕ್ಕ ಪದಾರ್ಥವನ್ನು ಚಿತ್ತವಿಟ್ಟು ನೋಡುತ್ತಿರುವಂತೆ, ನನ್ನ

ದೇಹದ ಪ್ರತಿಯೊಂದು ಭಾಗದಲ್ಲಿಯೂ ನಸುವೇಳೆ ನೋಟವನ್ನು ನಿಲ್ಲಿಸಿ ನೋಡುತ್ತಿದ್ದಳು. "ಇದೇನು? ಇವಳು ಹೀಗೇತಕ್ಕೆ ನನ್ನನ್ನು ನೋಡುತ್ತಿದ್ದಾಳೆ?" ಎಂದು ನನಗೆ ಹೇಳಲಾರದಷ್ಟು ಆಶ್ಚರ್ಯ. "ಈಕೆ ನನ್ನನ್ನು ನೋಡುತ್ತಿದ್ದಾಳೆ, ನಾನೇತಕ್ಕೆ ಈಕೆಯನ್ನು ನೋಡಬಾರದು!" ಎಂದಿತು ಮನಸ್ಸು. ಆಕಡೆಗೆ ನೋಟವನ್ನು ಹೊರಳಿಸುವೆ. ಮತ್ತೆ ನಾಚಿಕೊಂಡವನಾಗಿ ಬೇರೆ ಕಡೆಗೆ ನೋಡುವೆ. ಮನಸ್ಸು ಅಸ್ಥಿರವಾಗಿಹೋಯ್ತು. ನಾನು ಆಕೆಯ ಕಡೆಗೊಮ್ಮೆ ನೋಡಿದಾಗ, ಯಾವುದೋ ಒಂದು ಮಾತಿನ ನಿರ್ಣಯವನ್ನು ಕಂಡು ಹಿಡಿದಾಗಿನಂತಹ ಸಮಾಧಾನದ ಚಿಹ್ನವು ಮುಖದ ಮೇಲೆ ಮೂಡಿದ್ದಿತು. ಏತಕ್ಕಾಗಿಯೋ ಕನಕಮ್ಮ ತನ್ನ ಜೊತೆಗಾತಿಯನ್ನೊಮ್ಮೆ ಮಾತನಾಡಿಸಿದಳು. ಆಕೆ ಹೆಚ್ಚಿಗೆ ಮಾತುಗಳನ್ನೇನೂ ಆಡದೆ ಬರೀ ಹೂಗುಟ್ಟಿದಳು ಮಾತ್ರ. ಮುಖ ತಿರುಗಿಸಿ ನೋಡಲಿಲ್ಲ ಕೂಡ. ನನ್ನಲ್ಲಿಯೇ ನೆಲಸಿದ ಕಣ್ಣುಗಳು. ತನ್ನ ಜೊತೆಗಾತಿಯ ಈ ವ್ಯವಹಾರವನ್ನು ಕನಕಮ್ಮ ನೋಡಿದಳೋ ಇಲ್ಲವೋ ಹೇಳಲಾರೆ. ಆಕೆ ತನ್ನ ಕರ್ತವ್ಯದಲ್ಲಿ ಆಸಕ್ತಳಾಗಿಬಿಟ್ಟಿದ್ದಳು. ನನ್ನ ಹೆಂಡತಿ ಮಾತ್ರ– ಆ ಹೊಸ ಹೆಂಗುಸು ನನ್ನನ್ನು ಎಡೆಬಿಡದೆ ನೋಡುತ್ತಿರುವುದನ್ನು– ಕಣ್ಣಾರಳಿಸಿ ನೋಡಿಯೆ ನೋಡುತ್ತಿದ್ದಳು. ನಡುನಡುವೆ ನನ್ನ ಕಡೆಗೂ ಒಮ್ಮೊಮ್ಮೆ ದೃಷ್ಟಿಯನ್ನು ಚೆಲ್ಲುವಳು.

ನನ್ನ ಹೆಂಡತಿ ದಿನಾಲು ತನ್ನ ಬೇನೆಯ ಸಲುವಾಗಿ ಕನಕಮ್ಮನೊಡನೆ ಅದೆಷ್ಟೊ ಮಾತನಾಡುವವಳು; ಇಂದು ಹೆಚ್ಚಾಗಿ ಮಾತುಗಳೇ ಇಲ್ಲ. ಹೊಸತಾಗಿ ಬಂದಿದ್ದವಳನ್ನು ನೋಡುವುದರಲ್ಲಿ ಅವಳೂ ಮೈಮರೆತುಬಿಟ್ಟಿದ್ದಳೇನೊ! ಆರಯ್ಕೆಯನ್ನೆಲ್ಲ ಮುಗಿಸಿ ಕನಕಮ್ಮ ಮನೆಗೆ ಹೊರಟಳು. ಜೊತೆಗಾತಿಯೂ ಬೆಚ್ಚಿಬಿದ್ದವಳಂತಾಗಿ ಹೊರಡಲು ಎದ್ದು ನಿಂತಳು ಹೋಗುಹೋಗುತ್ತಿರುವಾಗಲೇ ಆಕೆ ಹಲವು ಸಲ ನನ್ನನ್ನು ಹೊರಳಿ ಹೊರಳಿ ನೋಡುತ್ತಿದ್ದಳು. ನಡೆಯುವಾಗ ಹೆಜ್ಜೆಗಳನ್ನು ಒತ್ತಾಯದಿಂದ ಎತ್ತಿಯೆತ್ತಿ ಇಡುತ್ತಿರುವಂತೆ ಕಾಣುತ್ತಿದ್ದಿತು. ಇಬ್ಬರನ್ನೂ ಹೊರಬಾಗಿಲ ತನಕ ಕಳುಹಿಸಿದೆ. ಬಳಿಕ ಮತ್ತೆ ನನ್ನ ಕಿರುಮನೆಯಲ್ಲಿ ಬಂದು ಕುಳಿತೆ. ನನ್ನ ಕಣ್ಣೆದುರು ಆಗಾಗ ಆ ಹೊಸಬಳ ಚಿತ್ರ ಬಂದು ನಿಲ್ಲುವುದು. ಮನದೆದುರು "ಆಕೆ ಅದೇತಕ್ಕೆ ಅಷ್ಟೊಂದು ನನ್ನನ್ನು ನೋಡಿರಬಹುದು?"

ಎಂಬ ಪ್ರಶ್ನೆಬಂದು ನಿಲ್ಲುವುದು.

ಅಂದು ಸಾಯಂಕಾಲದ ಆರಯ್ಕೆಗೆಂದು ಕನಕಮ್ಮ ನಮ್ಮ ಮನೆಗೆ ಬಂದಾಗ, ಆಕೆಯ ಜೊತೆಗೆ ಆ ಹೆಂಗುಸೂ ಇದ್ದಳು. ಕನಕಮ್ಮನಿಗೆ ತನ್ನ ಆರಯ್ಕೆಯ ಕೆಲಸ; ಆಕೆಯ ಜೊತೆಗಾತಿಗೆ ಎಡೆಬಿಡದೆ ನನ್ನನ್ನು ನೋಡುತ್ತಿರುವ ಕೆಲಸ. ಕನಕಮ್ಮ, ನಾನು ಏನೇನನೋ ಮಾತನಾಡುತ್ತಿದ್ದೆವು. ಆ ಹೆಂಗುಸು ಮಿಟ್ಟನೆ ಮಿಸುಕದೆ ಇದ್ದಳು.

ಇದಕ್ಕೆ ಮರುದಿನದ ಬೆಳಗು ಸಂಜೆಗಳಲ್ಲಿಯೂ ಕನಕಮ್ಮನ ಜೊತೆಗಾತಿ ನಮ್ಮ ಮನೆಗೆ ಬಂದಳು. ಆಕೆ ಯಾರೆಂಬುದನ್ನು ಕನಕಮ್ಮನಿಂದ ಕೇಳಿ ತಿಳಿದುಕೊಳ್ಳಬೇಕೆಂಬ ಕುತೂಹಲ ನನಗೆ. ಆದರೆ ಇಬ್ಬರೂ ಕೂಡಿಯೇ ಬರುವರು, ಕೂಡಿಯೆ ಹೋಗುವರು ; ಕೇಳುವುದಕ್ಕೆ ಅವಕಾಶ ಹೇಗೆ ದೊರೆಯಬೇಕು ! ಆ ಹೆಂಗುಸಿನ ಹೆಸರು "ಕಮಲಮ್ಮ" ಎಂದು ಇದ್ದಿತೇನೋ ! ಕನಕಮ್ಮ ಈ ಹೆಸರಿನಿಂದ ತನ್ನ ಜೊತೆಗಾತಿಯನ್ನು ಒಂದೆರಡು ಸಲ ಕರೆದುದನ್ನು ನಾನು ಕೇಳಿದೆನು. ಆ ಹೆಸರನ್ನು ಕೇಳಿದಾಗ "ಹಾಗಾದರೆ ಈಕೆ ಕ್ರೈಸ್ತ ಧರ್ಮಕ್ಕೆ ಸೇರಿದವಳಾಗಲಿಕ್ಕಿಲ್ಲ" ಎಂದು ಮನದಲ್ಲಿ ಎಂದುಕೊಂಡೆ.

೩

ಮೂರು ದಿನಗಳಿಂದ ನಮ್ಮ ಮನೆಗೆ ಆ ಹೆಂಗುಸು ಬರುತ್ತಿದ್ದರೂ ನನ್ನೊಡನೆ ಆಕೆಯ ಮಾತಿಲ್ಲ; ಆಕೆಯೊಡನೆ ನನ್ನ ಮಾತಿಲ್ಲ. "ನನ್ನನ್ನು ಆಕೆ ಇಷ್ಟೇಕೆ ನೋಡುತ್ತಿರಬಹುದು" ಎಂದು ನನಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ತಿಳಿದುಕೊಳ್ಳಬೇಕೆಂಬ ಹಂಬಲವು ಎದೆಯಲ್ಲಿ.

ನಾಲ್ಕನೆಯ ದಿನದ ಬೆಳಗು. ಮತ್ತೆ ಕನಕಮ್ಮ ಆ ಹೆಂಗುಸನ್ನು ಜೊತೆಗೊಂಡೇ ಬಂದಳು. ಬರಮಾಡಿಕೊಳ್ಳುವುದಾದ ಮೇಲೆ ಕನಕಮ್ಮ ತನ್ನ ಕೆಲಸಕ್ಕೆ ತೊಡಗಿದಳು. ಅವರಿಬ್ಬರೂ ಬರುವುದಕ್ಕೆ ಮೊದಲು ನಾನು ಓದುತ್ತ ಕುಳಿತಿದ್ದೆ; ಹಾಗೆಯೆ ಆ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡೇ ಹೋಗಿದ್ದೆ. ಹೊಸಬಳು ನನ್ನ ಕೈಯಲ್ಲಿದ್ದ ಪುಸ್ತಕದ ಕಡೆಗೆ ನೋಡುತ್ತ ಏನಯ ಬೆರೆತ ದನಿಯಲ್ಲಿ ಕೇಳಿದಳು: "ಅದೇನು ಪುಸ್ತಕ?" ಇದು ನನ್ನೊಡನೆ ಆಕೆ ಆಡಿದ ಮೊದಲನೆಯ ಮಾತು.

ನಾನು ಆಕೆಯ ಕಡೆಗೆ ಮುಖ ತಿರುಗಿಸಿ ಮರ್ಯಾದೆಯಿಂದ ಮಾತ ನಾಡಿದೆ: "ಇದೇ....? ಮಹಾಭಾರತದ ಉದ್ಯೋಗಪರ್ವ."

"ಎಲ್ಲಿ ನೋಡೋಣ? ಅದನ್ನು ಕೊಂಚ ಕೊಡುತ್ತೀರಾ?" ಎಂದು ನುಡಿಯುತ್ತಿರುವಾಗಲೆ ಮುಂದಕ್ಕೆ ಕೈಯನ್ನು ಚಾಚಿದಳು.

ನಾನು ಯಾವ ಮಾತನ್ನೂ ಆಡದೆ ಕೈಯಲ್ಲಿ ಪುಸ್ತಕವನ್ನು ಕೊಟ್ಟೆ.

ಪುಸ್ತಕವನ್ನು ತೆಗೆದುಕೊಂಡು ಮುಂಗಡೆಯ ರಕ್ಷಾಪತ್ರವನ್ನು ಮಗುಚಿದಳು. ಅದೆಷ್ಟೋ ವೇಳೆಯವರೆಗೆ ಸ್ಥಿರದೃಷ್ಟಿಯಿಂದ ಮೊದಲನೆಯ ಪುಟವನ್ನೇ ನೋಡುತ್ತ ನಿಂತುಕೊಂಡಳು. ಮಧ್ಯೆ ಒಂದು ಸಲ ಪ್ರಶ್ನಾ ತುರ ದೃಷ್ಟಿಯಿಂದ ನನ್ನನ್ನು ನೋಡಿದಳು. ಮತ್ತೆ ಆ ಮೊದಲನೆಯ ಪುಟ ದಲ್ಲಿಯೆ ನೋಟವನ್ನು ನೆಲಸಿದಳು. ಬಲಗೈ ಬೆರಳು ಕೆಳದುಟಿಯ ಮೇಲೆ ಹೋಯಿತು. ಮುಖದಲ್ಲಿ ಅದೇನೋ ಒಂದು ಬಗೆಯ ಬೆರಗುಗೊಂಡ ಭಾವವು ತಲೆದೋರಿತು.

"ಇದೇನು? ಮೊದಲನೆಯ ಪುಟವನ್ನೇ ಇಷ್ಟೊಂದು ನೋಡುತ್ತಿದ್ದೀರಿ?" ಮಾತನಾಡಿಸಲಿಕ್ಕೆ ಕಾರಣ ದೊರೆತಂತಾಯಿತು. ನಮ್ರತೆಯಿಂದ ಕೇಳಿಬಿಟ್ಟೆ.

ಆಕೆ ಮೆಲ್ಲಗೆ ನುಡಿದಳು: "ಏನೂ ಇಲ್ಲ; ಇಲ್ಲಿ ಹೆಸರು ಬರೆದಿದೆಯಲ್ಲವೇ? ಇದಾರದು? ನಿಮ್ಮ ಹೆಸರು ಅಲ್ಲವೇನೋ!"

ನಾನು ಕೂಡಲೆ ಹೇಳಿದೆ: "ಅಲ್ಲ, ನನ್ನದಲ್ಲ! ನನ್ನ ಚಿಕ್ಕಪ್ಪನ ಹೆಸರದು; ಅವರು ತರಿಸಿಟ್ಟ ಪುಸ್ತಕ."

"ಸರಿ ಸರಿ!" ಎಂದು ಆಕೆ ನುಡಿದು ಕೆಲವು ಪುಟಗಳನ್ನು ತಿರುವಿ ಹಾಕಿ, ಬೇರೊಂದು ಪುಟವನ್ನು ನೋಡಲು ತೊಡಗಿದಳು.

ಕನಕಮ್ಮ ತನ್ನ ಕೆಲಸ ಮಾಡುತ್ತಲೆ ಸಹಜವಾಗಿ ನನ್ನನ್ನು ಕೇಳಿದಳು: "ನಿಮಗೆ ಚಿಕ್ಕಪ್ಪ ಒಬ್ಬರು ಇದ್ದಾರೇನು? ನನಗೆ ಗೊತ್ತೇ ಇಲ್ಲವಲ್ಲ!"

"ಅಹುದು ಇದ್ದಾರೆ. ಅವರು ಇಲ್ಲಿರುವುದಿಲ್ಲ. ಸಿಂಹಲದ್ವೀಪ ದಲ್ಲಿದ್ದಾರೆ"

ಕನಕಮ್ಮ ಕೊಂಚ ಬೆರಗಾದ ದನಿಯಲ್ಲಿ ಕೇಳಿದಳು: "ಏನು ಸಿಂಹಲ ದ್ವೀಪದಲ್ಲಿದ್ದಾರೆ!"

"ಅಹುದು. ಕೋಲಂಬೋ ನಗರದಲ್ಲಿ ಒಂದು ಬ್ಯಾಂಕಿನ ಮುಖ್ಯ ಕಾರ್ಯದರ್ಶಿಗಳಾಗಿದ್ದಾರಂತೆ. ನಾನು ಅವರನ್ನು ನೋಡಿಲ್ಲ; ಅವರು ನನ್ನನ್ನು ನೋಡಿಲ್ಲ. ನಾನು ತೀರ ಚಿಕ್ಕವನಾಗಿದ್ದಾಗಲೆ ಈ ಊರನ್ನು ಬಿಟ್ಟು ಹೋಗಿದ್ದಾರಂತೆ."

"ಹಾಗಾದರೆ! ಅವರು ಈ ಊರಿಗೆ ಎಂದೂ ಬಂದೇ ಇಲ್ಲವೇ? ಅವರನ್ನು ನೀವು ನೋಡಿಯೇ ಇಲ್ಲವೇ?" ಇನ್ನಿಷ್ಟು ಆತುರದಿಂದ ಕನಕಮ್ಮ ಕೇಳಿದಳು.

"ನೋಡಿ! ನಮ್ಮ ತಂದೆ ಹಳೆಯ ಸಂಪ್ರದಾಯದವರು. ಚಿಕ್ಕಪ್ಪ ಕೆಲಸಕ್ಕಾಗಿ ಸಿಂಹಲದ್ವೀಪಕ್ಕೆ ಹೋಗಲು ಇಷ್ಟಪಟ್ಟಾಗ, ಅವರು ಒಪ್ಪಿಗೆ ಕೊಡಲಿಲ್ಲವಂತೆ. ಆದರೂ ಮಾತನ್ನು ಮೀರಿ ಚಿಕ್ಕಪ್ಪ ಹೊರಟುಬಿಟ್ಟರಂತೆ. ಇದರಿಂದ ನಮ್ಮ ತಂದೆಗೆ ಕೋಪ ಬಂದು, ತಮ್ಮನ ವಿಚಾರವನ್ನೇ ಬಿಟ್ಟು ಬಿಟ್ಟರಂತೆ. ನಮ್ಮ ಚಿಕ್ಕಪ್ಪ ಮೊದಮೊದಲು ಕಾಗದ ಬರೆಯುತ್ತಿದ್ದರಂತೆ; ಆದರೆ ತಂದೆ ಅದಕ್ಕೆ ಉತ್ತರವನ್ನೇ ಕೊಡದುದರಿಂದ ಅವರೂ ಕಾಗದ ಬರೆಯುವುದನ್ನು ನಿಲ್ಲಿಸಿಬಿಟ್ಟರಂತೆ. ನಮ್ಮ ತಂದೆ 'ನಮ್ಮ ರಾಮೂ ಬಲು ಬುದ್ಧಿವಂತ, ನನ್ನ ಮಾತನ್ನು ಕೇಳದೆ ಕೆಟ್ಟುಹೋದ' ಎಂದು ಆಗಾಗ ಹೇಳುತ್ತಿದ್ದರು. ನಮ್ಮ ಚಿಕ್ಕಪ್ಪನ ಹೆಸರು ರಾಮಚಂದ್ರರಾಯ. ನಮ್ಮ ತಂದೆಯವರ ಹಟಮಾರಿ ಸ್ವಭಾವ ಚಿಕ್ಕಪ್ಪನಿಗೆ ಗೊತ್ತೇನೊ! ಆಗ ಹೋದವರು ಇದುವರೆಗೂ ಈ ಊರ ಕಡೆಗೆ ಹಣೆಯಿಕ್ಕಿ ನೋಡಿಲ್ಲವಂತೆ. ಎಂದಮೇಲೆ ನಾನು ಅವರನ್ನು ನೋಡುವ ಸಂದರ್ಭ ಹೇಗೆ?"

ನಾನು ಕನಕಮ್ಮನಿಗೆ ಹೇಳುತ್ತಿದ್ದ ಮಾತುಗಳನ್ನೆಲ್ಲ ಆ ಹೆಂಗುಸು ಪುಸ್ತಕ ನೋಡುತ್ತಿರುವವರಂತೆ ನಟನೆ ಮಾಡುತ್ತ, ಕಿವಿಗೊಟ್ಟು ಕೇಳುತ್ತಿದ್ದ ಹಾಗೆ ನನಗೆನಿಸಿತು. ಕನಕಮ್ಮ ನನ್ನ ಹೆಂಡತಿಯ ಕಾಲನ್ನು ಕಾಸುತ್ತ, ನನ್ನ ಕಡೆಗೆ ನೋಡುತ್ತ ನುಡಿದಳು: "ಸರಿ! ಒಳ್ಳೆಯ ಅಣ್ಣ, ಒಳ್ಳೆಯ ತಮ್ಮ! ಅದೆಂತಹ ಕರುಳದು? ಒಂದೇ ಹೊಟ್ಟೆಯಿಂದ ಹುಟ್ಟಿಬಂದವರು-ಒಬ್ಬರನ್ನೊಬ್ಬರು ನೋಡದೆ ಇರಬೇಕೆಂದರೆ ಅದೆಂತಹ ಹಟವೊ ನಾನು ಕಾಣೆ." ಕನಕಮ್ಮ ಈ ಮಾತನಾಡುತ್ತಲೆ ಆ ಹೆಂಗುಸು ಪುಸ್ತಕದಲ್ಲಿದ್ದ ತನ್ನ ನೋಟವನ್ನು ನನ್ನ ಮುಖದ ಕಡೆಗೆ ಹೊರಳಿಸಿದಳು.

"ನೋಡಿ! ಕರುಳಿನ ಮುಂದೆ ಹಟದ ಆಟ ಎಷ್ಟು ದಿನ ನಡೆದೀತು!

ಮರಣಸಮಯದಲ್ಲಿ ನಮ್ಮ ತಂದೆ ತಮ್ಮ ಹಟಮಾರಿತನಕ್ಕಾಗಿ ತುಂಬ ಅನುತಾಪ ಪಟ್ಟರು. 'ರಾಮು! ನನ್ನ ರಾಮು!' ಎಂದು ತಮ್ಮನಿಗಾಗಿ ಹಂಬಲಿಸುತ್ತಲೆ ಪ್ರಾಣಬಿಟ್ಟರು." ನಾನು ನಿಟ್ಟುಸಿರಿಡುತ್ತ ಹೇಳಿದೆ.

"ಅಯ್ಯೋ ಪಾಪ!" ಎಂದು ಕನಕಮ್ಮ ಕನಿಕರದ ಮಾತನಾಡಿದಳು. ಕನಕಮ್ಮನ ಜೊತೆಗಾತಿಯೂ ನಿಡಿದಾಗಿ ಒಂದು ಉಸಿರನ್ನು ಹಾಕಿದಳು.

ಕೆಲಸವನ್ನೆಲ್ಲ ಮುಗಿಸಿ 'ಇನ್ನು ಹೊರಡೋಣವೇ!' ಎಂದು ಕನಕಮ್ಮ ತನ್ನ ಜೊತೆಗಾತಿಯನ್ನು ಎಚ್ಚರಿಸಿದಳು. ಆಕೆ ನನ್ನ ಕಡೆಗೆ ನೋಡುತ್ತ "ಈ ಪುಸ್ತಕ ಇದೊಂದು ದಿನ ನೋಡಿಕೊಡಲೇ?" ಎಂದಳು.

"ಆಗಬಹುದು, ಅದಕ್ಕೇನು!" ನಾನು ಹೇಳಿದೆ. ಇಬ್ಬರೂ ಹೊರಟು ಹೋದರು. ಒಂದು ವಿಚಿತ್ರ ನೋಡಿ! ನಾನು ಹೊಸಬಳಾದ ಆ ಹೆಂಗುಸಿನೊಡನೆ ಮಾತನಾಡುತ್ತಿರುವುದನ್ನೂ ಆಕೆಯ ಕೈಯಲ್ಲಿ ಪುಸ್ತಕ ಕೊಟ್ಟುದನ್ನೂ ನನ್ನ ಹೆಂಡತಿ ತೆರೆದ ಕಣ್ಣುಗಳಿಂದ–ಮಲಗಿಕೊಂಡೇ–ನೋಡುತ್ತಿದ್ದಳು. ನಡುನಡುವೆ ಬೇಸರಗೊಂಡವಳಂತೆ ಮುಖಮುದುಡಿಸುತ್ತಿದ್ದಳು. ಮೈಯ ನೋವಿಗಾಗಿ ಹೀಗೆ ಮಾಡುತ್ತಿರಬಹುದೆಂದು ನಾನು ಭಾವಿಸಿದೆ.

೪

ಮರುದಿನ ಆರಯ್ಕೆಗೆಂದು ಕನಕಮ್ಮ ಬಂದಾಗ, ಜೊತೆಗೆ ಬಂದಿದ್ದ ಆ ಹೆಂಗುಸು ದಿನದಂತೆ ತೆಪ್ಪಗೆ ಕುಳಿತುಕೊಂಡಿರಲಿಲ್ಲ. ಕನಕಮ್ಮನ ಕೆಲಸದಲ್ಲಿ ನೆರವಾಗುತ್ತಿದ್ದಳು. ಆಕೆ ಸಲುಗೆಯ ಮಾತಿನಿಂದ ನನ್ನ ಹೆಂಡತಿಯೊಂದಿಗೆ ಏನನಾದರೂ ನಗೆಯಾಡುತ್ತಿದ್ದಳು. ನಾನೂ ಅವರಿಬ್ಬರೊಂದಿಗೆ ಮೈಮನ ಸಡಿಲು ಬಿಟ್ಟು ಮಾತನಾಡುತ್ತ ಅಲ್ಲಿಯೇ ಕುಳಿತುಕೊಂಡಿದ್ದೆ. ಅದೆಷ್ಟೋ ಮಾತುಗಳಾದುವು. ಏತಕ್ಕೋ ಮಡಿ-ಮೈಲಿಗೆಯ ವಿಚಾರವಾಗಿ ಮಾತು ಬಂದಿತು. ಆಗ ನಾನು ನಮ್ಮ ತಾಯಿಯ ಮಡಿ–ಮೈಲಿಗೆಯ ಹುಚ್ಚು ಹುಚ್ಚು ಕಲ್ಪನೆಗಳನ್ನು ನಸು ಉಪ್ಪುಕಾರ ಹಚ್ಚಿ ಹೇಳಿದೆ. ಕೇಳಿ ಅವರಿಬ್ಬರೂ ಅದೆಷ್ಟೋ ನಕ್ಕು ಬಿಟ್ಟರು. ತಮ್ಮ ಸೋದರತ್ತೆಯೊಬ್ಬಳ ವಿಚಾರವಾಗಿ ಮಡಿಮೈಲಿಗೆಯ ಮನೋರಂಜಕವಾದ ಸುದ್ದಿಗಳನ್ನು ಕನಕಮ್ಮನ ಜೊತೆಗಾತಿ ಹೇಳಿದಳು. ಅಂದಿನ ಮಾತಿನಿಂದ ಆಕೆ ಕ್ರೈಸ್ತಧರ್ಮಕ್ಕೇನೂ ಸೇರಿದವಳಲ್ಲ–ಎಂದು ನಿಶ್ಚಯವಾಗಿ ತಿಳಿದಂತಾಯಿತು. "ಹಾಗಾ

ದರೆ ಈಕೆ ವಿಧವೆಯೇ ! " ಎಂದು ಮನಸ್ಸಿನಲ್ಲಿ ಎಂದುಕೊಂಡೆ.

ಇಲ್ಲಿ ಒಂದು ವಿಷಯ ಹೇಳಬೇಕಾಗಿದೆ. ನಾವು ಮೂವರೂ ಮಾತ ನಾಡಿ ಅದೆಷ್ಟೋ ನಗುತ್ತಿದ್ದೆವು. ಆದರೆ ನನ್ನ ಹೆಂಡತಿ ನಕ್ಕುದನ್ನು ಅಂದು ಒಂದು ಸಲವೂ ನೋಡಲಿಲ್ಲ. ಗಂಟುಮೊಗದಿಂದ ನನ್ನ ಕಡೆಗೊಮ್ಮೆ, ಕನ ಕಮ್ಮನ ಕಡೆಗೊಮ್ಮೆ, ಆ ಹೆಂಗುಸಿನ ಕಡೆಗೊಮ್ಮೆ ನೋಡುತ್ತಿದ್ದಳು ಮಾತ್ರ.

ಅಂದು ಇಬ್ಬರೂ ಮನೆಗೆ ಹೊರಟರು. ''ತಮ್ಮ ಪುಸ್ತಕ ತರಲಿಕ್ಕೆ ಮರೆತು ಬಂದೆ. ಸಾಯಂಕಾಲಕ್ಕೆ ತೆಗೆದುಕೊಂಡು ಬರುತ್ತೇನೆ." ಎಂದು ಆ ಹೆಂಗುಸು ವಿನಯದಿಂದ ಹೇಳಿದಳು. "ಆಗಬಹುದು. ನಾಳೆಗೆ ತಂದರೂ ಅಡ್ಡಿಯಿಲ್ಲ.'' ಎಂದು ನಾನೆಂದೆ. ಇಬ್ಬರೂ ಹೊರಟು ಹೋಗಿಬಿಟ್ಟರು.

ಅದೇ ದಿನ ಮೂರುವರೆ ಗಂಟೆಯಾಗಿರಬಹುದು. ನಾನು ನನ್ನ ಕಿರು ಮನೆಯಲ್ಲಿ ಕುಳಿತುಕೊಂಡು, ಅಂದೇ ಬಂದಿದ್ದ ಮಾಸಪತ್ರಿಕೆಯೊಂದನ್ನು ಓದುತ್ತಿದ್ದೆ. ಕಿರುಮನೆಯ ಬಾಗಿಲಲ್ಲಿ ಕಾಲಸಪ್ಪಳು ಕೇಳಿಸಿದಂತಾಯಿತು. ಯಾರೆಂಬುದನ್ನು ನೋಡಲು ಎದ್ದು ಬಂದೆ, ನೋಡಿದೆ. ಕನಕಮ್ಮನ ಜೊತೆ ಗಾತಿ; ಆಗ ತಾನೆ ಬಂದು ನಿಂತಿದ್ದಳೇನೋ ! ಕೈಯಲ್ಲಿ ನನ್ನ ಪುಸ್ತಕ. ನನ್ನನ್ನು ನೋಡುತ್ತಲೆ ಆಕೆ ಮಾತನಾಡಿದಳು :

" ತಮಗೆ ಬೇಕಾಗಬಹುದೇನೋ ಎಂದು ಪುಸ್ತಕವನ್ನು ತೆಗೆದು ಕೊಂಡು ಬಂದೆ."

" ಅಷ್ಟೇನೂ ಆತುರವಿರಲಿಲ್ಲ. ಅದಕ್ಕಾಗಿಯೆ ಏತಕ್ಕೆ ಬರಬೇಕಾಗಿ ದ್ದಿತು ? ಸಂಜೆಗೆ ಬರುವಾಗ ತಂದಿದ್ದರೆ ಆಗುತ್ತಿದ್ದಿಲ್ಲವೆ ? '' ಎಂದು ಮಾತ ನಾಡುತ್ತಲೆ ಆಕೆ ಕೊಡಲು ಮುಂದೆ ಮಾಡಿದ್ದ ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡೆನು. ಮತ್ತೆ ವಿನಯದ ನಗೆ ನಗುತ್ತ ಹೇಳಿದೆನು : "ಬನ್ನಿ ರಮ್ಮಾ ಒಳಕ್ಕೆ !''

ನಾನು ಕರೆಯುವುದು ಆಕೆಗೆ ಬೇಕಾಗಿತ್ತೆಂದು ತೋರುತ್ತದೆ. ಕೂಡಲೆ ನನ್ನನ್ನು ಹಿಂಬಾಲಿಸಿ ಬಂದೇಬಿಟ್ಟಳು. ಕುಳಿತುಕೊಳ್ಳದೆ ನನ್ನ ಗ್ರಂಥಸಂಗ್ರಹವಿದ್ದ 'ಅಲ್‌ಮೇರಾ'ದ ಕಡೆಗೆ ನಡೆದಳು. ಬಾಗಿಲು ತೆರೆದಿ ದ್ದಿತು ಅಲ್ಲಿಯ ಪುಸ್ತಕಗಳನ್ನು ನಿಟ್ಟಿಸಿ ನೋಡುತ್ತ " ಅಬ್ಬಾ ! ತುಂಬ ಗ್ರಂಥಗಳನ್ನು ಸಂಗ್ರಹಿಸಿದ್ದೀರಲ್ಲ ನೀವೂ'' ಎಂದು ನುಡಿದಳು.

" ಏನೋ ತಕ್ಕಮಟ್ಟಿಗೆ ಇವೆ. ನಮ್ಮ ಚಿಕ್ಕಪ್ಪ ಇದ್ದಾರೆಂದು

ಹೇಳಿದೆನಲ್ಲವೆ! ಅವರು ಕೂಡಿಸಿಟ್ಟಿದ್ದ ಗ್ರಂಥಗಳೇ ಇದರಲ್ಲಿ ಮುಕ್ಕಾಲು ಪಾಲಿವೆ. ನಾನು ಕೂಡಿಸಿದುದು ಎಲ್ಲಿಯೊ ಸ್ವಲ್ಪ. ನನಗೂ ಕೊಂಚ ಓದುವುದರಲ್ಲಿ ಅಭಿಲಾಷೆ. ಪುಸ್ತಕಗಳನ್ನು ಹಾಳು ಮಾಡದೆ ಕಾಯ್ದಿಟ್ಟು ಕೊಂಡಿದ್ದೇನೆ.'' ಕೊಂಚ ಹೆಮ್ಮೆ, ವಿನಯ ಎರಡೂ ಬೆರೆತ ದನಿಯಲ್ಲಿ ಹೇಳಿದೆ. ಆಕೆ ಒಂದೊಂದಾಗಿ ಪುಸ್ತಕಗಳನ್ನು ತೆಗೆತೆಗೆದು ಅದೆಷ್ಟೋ ವೇಳೆಯ ವರೆಗೆ ನೋಡುತ್ತಿದ್ದಳು. ಆಗ ಆಕೆಯನ್ನು ಚೆನ್ನಾಗಿ ನೋಡಲು ಒಳ್ಳೆಯ ಸಂಧಿ ದೊರೆತಂತಾಯಿತು. ಅವಳ ಹುಟ್ಟುಚೆಲುವಿಕೆಯನ್ನೂ ಅಚ್ಚುಕಟ್ಟುತನವನ್ನೂ ಬೆರಗುಗಣ್ಣುಗಳಿಂದ ನೋಡಿಯೇ ನೋಡುತ್ತಿದ್ದೆ. 'ವೇಳೆಯಲ್ಲದ ವೇಳೆಯಲ್ಲಿ–ಒಬ್ಬಳೇ ಒಬ್ಬಳು–ಕನಕಮ್ಮನನ್ನು ಬಿಟ್ಟು ಅದೇತಕ್ಕೆ ಇಲ್ಲಿಗೆ ಬಂದಿರಬಹುದು? ಸಂಜೆಗೆ ಬರುವಾಗ ಪುಸ್ತಕ ತಂದಿದ್ದ ರಾಗುತ್ತಿದ್ದಿಲ್ಲವೇ?' ಎಂಬ ಯೋಚನೆಯು ನನ್ನನ್ನು ಕೊಂಚಕಾಲ ಶೂನ್ಯ ದೃಷ್ಟಿಯವನನ್ನಾಗಿ ಮಾಡಿತು.

ಪುಸ್ತಕ ನೋಡುವುದು ಸಾಕಾಗಿ, ಆಕೆ ಬಂದು ಕುರ್ಚಿಯ ಮೇಲೆ ಕುಳಿತಳು. ನಗೆಗಣ್ಣಿನಿಂದ ನನ್ನನ್ನು ನೋಡುತ್ತ ಮಾತನಾಡಿದಳು:

"ಒಂದು ವಿಚಾರ ತಮ್ಮನ್ನು ಕೇಳಬೇಕಾಗಿದೆ. ಕೇಳಲೇ?"

ನಾನು ಬೆದರುದನಿಯಲ್ಲಿ ಕೇಳಿದೆನು: "ಅದೇನು ವಿಚಾರ?"

ಆಕೆ ಹೇಳಲು ತೊಡಗಿದಳು: "ನೋಡಿ! ಈ ಊರಿಗೆ ನಾನು ಹೊಸ ಬಳು. ಯಾರ ಗುರುತು ಪರಿಚಯಗಳೂ ನನಗಿಲ್ಲ. ಗುರುತಿನಾಕೆಯೆಂದರೆ ಒಬ್ಬಳೇ ಕನಕಮ್ಮ. ಆಕೆಗೆ ವಿಪರೀತ ಕೆಲಸ. ನನ್ನೊಡನೆ ಮಾತುಕತೆ ಯಾಡುತ್ತ ಕುಳಿತುಕೊಳ್ಳಲಿಕ್ಕೆ ಬಿಡುವೇ ಸಿಕ್ಕುವುದಿಲ್ಲ. ನನಗೆ ಒಬ್ಬಳಿಗೆ ವೇಳೆಯೇ ಹೋಗುವುದಿಲ್ಲ. ಓದುವುದೆಂದರೆ ನನಗೆ ತುಂಬ ಇಷ್ಟ. ನಿಮ್ಮಲ್ಲಿ ಬೇಕಾದಷ್ಟು ಗ್ರಂಥಸಂಗ್ರಹವಿದೆ; ಅಲ್ಲದೆ ನಿಮ್ಮಂತಹ ಸುಸಂಸ್ಕೃತ ಹೃದ ಯದವರೊಡನೆ ಮಾತುಕತೆಯಾಡುವುದಕ್ಕೆ ಅನುಕೂಲವಿದೆ...." ಹೇಳು ಹೇಳುತ್ತಿರುವಾಗಲೆ ಅರ್ಧಕ್ಕೆ ಮಾತು ನಿಲ್ಲಿಸಿ, ಕುತೂಹಲಭಾವದಿಂದ ನನ್ನನ್ನು ನೋಡಲು ತೊಡಗಿದಳು.

ವಿನಯ, ಒಂದು ಬಗೆಯ ಸಂಕೋಚವೃತ್ತಿ ಇವುಗಳು ಬೆರೆತ ದನಿ ಯಲ್ಲಿ ಕೇಳಿದೆ: "ತಮಗೆ ಏನು ಆಗಬೇಕಿದೆ?"

"ಇನ್ನೇನೂ ಇಲ್ಲ. ಆಗಾಗ ನಾನು ತಮ್ಮ ಮನೆಗೆ ಬಂದು ಕುಳಿತು

ಕೊಳ್ಳುತ್ತಿದ್ದರೆ ಅಭ್ಯಂತರವೇನೂ ಇಲ್ಲವಷ್ಟೇ?" ಆಕೆ ಕೇಳಿದಳು.

ಎದೆಯಲ್ಲಿ ದಡಗುಟ್ಟಿತು. ಏನು ಹೇಳಬೇಕೆಂಬುದು ತಿಳಿಯ ದಾಯಿತು. ಬಿರುಗಾಳಿಗೆ ಸಿಕ್ಕ ದೋಣಿಯಂತೆ ಮನಸ್ಸು ಹೊಯ್ದಾಡಲ ತೊಡಗಿತು. ಆದರೂ ದಾಕ್ಷಿಣ್ಯದ ಹೊರಮಾತಿನಲ್ಲಿ ಹೇಳಿದೆನು: "ಬಂದು ಕುಳಿತುಕೊಳ್ಳಬಹುದಲ್ಲ! ಅದಕ್ಕೆ ಅಭ್ಯಂತರವೇನು?" ನಾನೀಗ ಒಪ್ಪಿಗೆ ಕೊಡುತ್ತಿರುವುದು ತಪ್ಪೋ ಒಪ್ಪೋ ಎಂಬುದನ್ನು ಮನಸ್ಸು ನಿರ್ಣಯಿಸ ತ್ತಿರುವಾಗಲೆ ನಾಲಗೆ ದಾಕ್ಷಿಣ್ಯದಿಂದ ನುಡಿದುಬಿಟ್ಟಿತು. ಮಾತನ್ನು ಕೇಳಿ ಆಕೆಗೆ ತುಂಬ ಸಮಾಧಾನವಾಯಿತೆಂಬುದನ್ನು ಮುಖಭಾವದಿಂದ ಕಂಡುಕೊಂಡೆ.

"ತಾವು ಈ ಊರಿಗೆ ಹೊಸಬರೆಂದು ಹೇಳಿದಿರಲ್ಲ; ತಮ್ಮದು ಯಾವ ಊರು?" ನಾನು ಮನಸ್ಸನ್ನೊಳ್ಳೆ ಗಟ್ಟಿಮಾಡಿಕೊಂಡು ಕೇಳಿದೆ.

ಆಕೆ ಕೂಡಲೆ ಹೇಳಿದಳು: "ನಾನು ಹುಟ್ಟಿದೂರು ಶಿವಮೊಗ್ಗ" ಇನ್ನಾವುದನ್ನೂ ಹೇಳುವುದಕ್ಕೆ ಆಕೆಗೆ ಮನಸ್ಸಿಲ್ಲವೆಂಬುದನ್ನು ಕಂಡು ಕೊಂಡೆ.

ಬಳಿಕ ನಾನು ಯಾವುದನ್ನೂ ಕೇಳಲಿಲ್ಲ. "ಮತ್ತೆ ಬರುವೆನು" ಎಂದು ಹೇಳಿ, ಆಕೆ ಹೊರಟು ಬಿಟ್ಟಳು. ಆಕೆಯನ್ನು ಕಳುಹಿಸುವುದಕ್ಕೆಂದು ಹೊರಬಾಗಿಲವರೆಗೆ ನಾನೂ ಹೋಗಿ ಮರಳಿ ಬಂದೆ.

ನನ್ನ ಹೆಂಡತಿ ಮಲಗಿದ್ದ ಮನೆಗೂ ನನ್ನ ಕಿರುಮನೆಗೂ ಮಧ್ಯೆ ಒಂದು ಕಿಟಕಿಯಿದೆ. ಆ ಹೆಂಗುಸು ಬಂದು ನನ್ನ ಕಿರುಮನೆಯಲ್ಲಿ ಕುಳಿತು ದನ್ನು ಆಕೆ ನೋಡಿರಬಹುದು. ನಾವಿಬ್ಬರೂ ಮಾತನಾಡುತ್ತಿರುವುದನ್ನೆಲ್ಲ ಕಿವಿಗೊಟ್ಟು ಕೇಳಿರಬಹುದು.

ಕಿರುಮನೆಯೊಳಕ್ಕೆ ಒಬ್ಬನೇ ಕುಳಿತಿದ್ದೆ. ಏನೇನನ್ನೋ ಯೋಚಿಸಲು ತೊಡಗಿದೆ. ಆ ಹೆಂಗುಸು ಒಬ್ಬಳೆ ಒಬ್ಬಳಾಗಿ ಇಲ್ಲಿಗೆ ಬಂದುದೂ, ಆಗಾಗ ಬರುವುದಕ್ಕೆ ಅಪ್ಪಣೆ ಕೇಳಿದುದೂ ಒಡೆಯದ ಒಗಟಾಗಿ ತೋರಿದುವು ನನಗೆ. 'ನಾಳೆಗೆ ಮತ್ತೆ ಒಬ್ಬಳೇ ಬಂದಳೆಂದರೆ, ನಮ್ಮ ಮನೆಗೆ ಹೆಚ್ಚಾಗಿ ಬರ ಕೂಡದು- ಎಂದು ಉಪಾಯದಿಂದ ಆಕೆಗೆ ಹೇಳಿಬಿಡಬೇಕು." ಎಂತಲೂ ಒಮ್ಮೆ ನಿಶ್ಚಯಿಸಿದೆ. ನೋಡಿ! ನನ್ನ ಹೃದಯ ಹಸನಾಗಿ ಇರಬಹುದು; ಆಕೆಯದು ಹೇಗೋ ಏನೋ ಅರಿತವರಾರು? "ಸುಮ್ಮ ಸಮ್ಮನೆ ಆಕೆಗೆ

ಆಕೆಯ ಮಾತನ್ನು ಹೇಳಿದೆನಲ್ಲ!" ಎಂದು ಮನದಲ್ಲಿಯೆ ಮರುಗಿದೆ. ಅಂದು ನಾನೇನೋ ದೊಡ್ಡ ಗಂಡಾಂತರದಲ್ಲಿ ಸಿಕ್ಕು ಬಿದ್ದಂತೆ ಎನಿಸುತ್ತಿದ್ದಿತು. ಗಳಿಗೆ ಗಳಿಗೆಗೂ ಎದೆಯು ದಡದಡನೆ ಬಡಿದುಕೊಳ್ಳುತ್ತಿದ್ದಿತು.

ಹಾಗೆಯೇ ಏನೇನನೋ ಯೋಚಿಸುತ್ತ, ಆಕೆ ತಂದುಕೊಟ್ಟಿದ್ದ ಪುಸ್ತಕ ವನ್ನು ಕೈಯಲ್ಲಿ ತೆಗೆದುಕೊಂಡೆ. ಸುಮ್ಮನೆ ಒಂದೊಂದಾಗಿ ಪುಟಗಳನ್ನು ಮಗುಚಲು ತೊಡಗಿದೆ. ಆ ಪುಸ್ತಕದಲ್ಲಿ ನಮ್ಮ ಚಿಕ್ಕಪ್ಪನ ಭಾವಚಿತ ವೊಂದನ್ನು ಇಟ್ಟಿದ್ದೆ. ಅದು ಅವರ ಇಪ್ಪತ್ತೈದನೆಯ ವಯಸ್ಸಿನಲ್ಲಿ ತೆಗೆದ್ದು ದಂತೆ. ಅದನ್ನು ನೋಡಿದವರಿಗೆ ಅದು ನನ್ನ ಭಾವಚಿತ್ರವೇ ಎಂದು ಭಾಸ ವಾಗುವಂತಿದ್ದಿತು. ಪುಸ್ತಕದ ಪುಟಗಳನ್ನು ಮಗುಚಿ ಹಾಕುತ್ತಿರುವಾಗ ಫಕ್ಕನೆ ಆ ಚಿತ್ರದ ಜ್ಞಾಪಕವಾಯಿತು. ಅದು ಪುಸ್ತಕದಲ್ಲಿ ಇರಲೇ ಇಲ್ಲ. "ನಿನ್ನೆ ಆಕೆಯ ಕೈಯಲ್ಲಿ ಈ ಪುಸ್ತಕ ಕೊಟ್ಟಾಗ ಇದರಲ್ಲಿ ಚಿತ್ರವಿದ್ದಿಲ್ಲವೇ!" ಎಂದುಕೊಂಡೆ. ಮತ್ತೊಮ್ಮೆ ಚೆನ್ನಾಗಿ ನೋಡಿದೆ. ಇದ್ದರೆ ಸಿಕ್ಕಬಹುದು; ಆ ಚಿತ್ರ ಪುಸ್ತಕದಲ್ಲಿ ಇಲ್ಲದಂತಾದುದೂ ಅಂದಿನ ಅಸ್ಥಿರವಾಗಿದ್ದ ನನ್ನ ಮನಸ್ಸಿಗೆ ವಿಪರೀತವಾಗಿ ತೋರಿತು. ಎಂತೆಂತಹವೊ ಯೋಚನೆಗಳು ತಲೆಯಲ್ಲಿ ಬರಲು ತೊಡಗಿದುವು. ಎದೆಯು ಅದುರಿತು.

೫

ತನಗೆ ಬಿಡುವು ದೊರೆತಾಗಲೆಲ್ಲ ಆಕೆ ನಮ್ಮ ಮನೆಯಲ್ಲಿ ಬಂದು ಕುಳಿತುಕೊಳ್ಳಲು ತೊಡಗಿದಳು. ನಮ್ಮ ಮನೆಗೆ ಹೆಚ್ಚಾಗಿ ಬರಕೂಡದೆಂದು, ಉಪಾಯವಾಗಿ ಆಕೆಗೆ ಹೇಳಿಬಿಡಬೇಕೆಂದು ನಿರ್ಣಯಿಸಿಕೊಂಡಿದ್ದೆನಲ್ಲವೇ! ಆ ನಿರ್ಣಯವು ಇದ್ದುದಿದ್ದಲ್ಲಿಯೆ ಕರಗಿಹೋಗಲು ತೊಡಗಿತು. ಮನೆಗೆ ಬರುತ್ತಿರುವವರನ್ನು–ಅದರಲ್ಲಿಯೂ ಮೊದಲೆ ವಿನಯದಿಂದ ಕೇಳಿಕೊಂಡು ಬರುತ್ತಿರುವವರನ್ನು–ಬರಕೂಡದೆಂದು ಹೇಳುವಂತಹ ಎದೆಯು ಆದಾವ ಸಭ್ಯಗೃಹಸ್ಥನಿಗಾದೀತು!

ಮೊದಮೊದಲು ಒಂದೆರಡು ದಿನ- ಆಕೆ ಒಬ್ಬಳೇ ಇರುವುದರಿಂದ–ಮೈ ಸಡಿಲು ಬಿಟ್ಟು ಮಾತನಾಡುವುದಕ್ಕೆ ನನಗೆ ಆಗುತ್ತಿರಲಿಲ್ಲ. ನಾಚಿಕೆಯೋ ಹೆದರಿಕೆಯೋ ಕಾಣೆ; ತುಂಬ ಹುದುಗಿಕೊಂಡವನಾಗಿ ಮಾತನಾಡುತ್ತಿದ್ದೆ. ಆದರೆ, ಆ ಒಂದೆರಡು ದಿನಗಳ ಮಾತುಕತೆಗಳಿಂದ–ಸಹವಾಸದಿಂದ- ಆಕೆಯು

ಸುಸಂಸ್ಕೃತ ಹೃದಯ, ಕೃತ್ರಿಮತೆಯ ಸೋಂಕು ಇಲ್ಲದ ಸರಲಸ್ವಭಾವ
ಸತ್ಯನಿಷ್ಠೆಯು ಕಡೆಗಿರುವ ಒಲವು ಇವುಗಳ ಅನುಭವವು ನನಗೊದಗಿತು
ನಿಶ್ಚಿಂತನಾದೆನು. ಮನದ ಹೆದರಿಕೆ ಬೆದರಿಕೆಗಳು ಚದರಿ ಹೋದುವು. ಆಕೆ
ಯೊಡನೆ, ಹೆಚ್ಚು ಸಲುಗೆಯಿಂದ-ನಮಗೆ ತೀರ ಪರಿಚಿತರಾದವರೊಡನೆ
ಮಾತನಾಡುವಂತೆ-ಮಾತನಾಡಲು ತೊಡಗಿದೆನು. ಆಗಾಗ ನಮ್ಮಿಬ್ಬರಲ್ಲಿ
ಬೇರೆ ಬೇರೆ ಸಾಮಾಜಿಕ ತೊಡಕುಗಳ ವಿಚಾರವಾಗಿ-ಧಾರ್ಮಿಕ ಸಂಪ್ರ
ದಾಯಗಳ ವಿಚಾರವಾಗಿ-ಚರ್ಚೆ ವಿಚರ್ಚೆ ನಡೆಯುವುದು. ವಾದದಲ್ಲಿ
ಒಂದು ಸಲ ನಾನು ಸೋಲುವೆನು; ಇನ್ನೊಂದು ಸಲ ಆಕೆ ಸೋಲುವಳು.
ಯಾರು ಸೋತರೂ ಯಾರಿಗೂ ಅಸಂತೋಷವಿಲ್ಲ. ಇಷ್ಟಾದರೂ ಆಕೆಯ
ಪೂರ್ವೋತ್ತರಗಳನ್ನು ಕೇಳಿ ತಿಳಿದುಕೊಳ್ಳುವ ಧೈರ್ಯ ನನಗಾಗಲೊಲ್ಲದು.
ಕೇಳಬೇಕೆಂದೇನೋ ಮನಸ್ಸಿನ ಕುಣಿದಾಟ.

ಆಕೆ ನಮ್ಮ ಮನೆಗೆ ಬರತೊಡಗಿದಾಗಿನಿಂದ ನನ್ನದೊಂದು ದೊಡ್ಡ
ತೊಂದರೆ ತಪ್ಪಿದಂತಾಯಿತು. ನನ್ನ ಮಗುವನ್ನು ಅದೆಷ್ಟೋ ಅಚ್ಚು ಮೆಚ್ಚಿ
ನಿಂದ ಆಕೆ ಎತ್ತಿಕೊಳ್ಳುವಳು; ಬಗೆಬಗೆಯಿಂದ ಆಟವಾಡಿಸುವಳು. ಅದೂ
ತುಂಟಹುಡುಗ ನೋಡಿ! ಒಂದೆರಡು ದಿನಗಳಲ್ಲಿಯೇ ಆಕೆಯ ಪರಿಚಯ
ಮಾಡಿಕೊಂಡಿತು. ಆಕೆಯ ಬಳಿಯಲ್ಲಿದ್ದಾಗ ಮಗುವು ಅದೆಷ್ಟೋ ಆಟವಾಡು
ವುದು; ಹಿಗ್ಗಿದ ಮೊಗದಿಂದ ನಗುವುದು; ಮೆಚ್ಚಿ ಮುತ್ತಿಟ್ಟರೆ ನಗೆಗಣ್ಣು
ಗಳಿಂದ ಆಕೆಯನ್ನು ನಿಟ್ಟಿಸಿ ನೋಡಿಯೆ ನೋಡುವುದು. ಇದನ್ನೆಲ್ಲ ನೋಡಿ
ನನ್ನ ಹಿಗ್ಗು ಹೃದಯದಲ್ಲಿ ಹಿಡಿಸದಾಗುವುದು. ಆಕೆಯದೇನು ಕೈಗುಣವೊ
ಕಾಣೆ; ಮಗುವಿನ ಅಳುವು ಕಡಿಮೆಯಾಗಿ ಅದೀಗ ಹಾಯಾಗಿ ನಿದ್ದೆ ಮಾಡು
ತ್ತದೆ. ಇದರಿಂದ ನನ್ನ ವಾಚನವ್ಯವಸಾಯಕ್ಕೆ ಹೆಚ್ಚು ಅನುಕೂಲ
ವಾಯಿತು.

ಹೀಗೆಯೆ ನಮ್ಮಿಬ್ಬರಲ್ಲಿ ಒಂದುದಿನ ಮಾತುಕತೆ ನಡೆದಾಗ ನಾನು
ಉದ್ದೇಶಪೂರ್ವಕವಾಗಿಯೆ ಪುನರ್ವಿವಾಹದ ವಿಚಾರ ತೆಗೆದೆ. ಪುನರ್ವಿವಾಹ
ಎಂದು ಕೇಳಿದೊಡನೆಯೆ, ಆಕೆಯ ಮುಖ ಮುದುಡಿಸಿದಂತೆ ಕಂಡಿತು.
ತಟ್ಟನೆ ಹೇಳಿದಳು:

"ಆ ವಿಷಯವನ್ನೆತ್ತಬೇಡಿ! 'ಪುನರ್ವಿವಾಹ' ಎಂಬ ಶಬ್ದವನ್ನು
ಕೇಳುವುದಕ್ಕೆ ಕೂಡ ನನ್ನಿಂದಾಗದು. ಕಿವಿಯಲ್ಲಿ ಸೂಜಿಯಿಂದ ಚುಚ್ಚಿ

ಂತಾಗುತ್ತದೆ. 'ವಿಷಯಾಭಿಲಾಷೆಯೇ ವಿವಾಹದ ಉದ್ದೇಶ' ಎಂದು
ಳಿದುಕೊಂಡಿದ್ದ ಸಾಮಾನ್ಯ ಸಂಸ್ಕಾರದ ಜನರು ಮಾತ್ರ, ಈಗ ಆ ಪುನರ್ವಿ
ಾಹದ ಪ್ರಶ್ನೆಯನ್ನು ಎತ್ತಿ ಹಿಡಿಯುತ್ತಿದ್ದಾರೆ. ವಿವಾಹದ ಗುಟ್ಟನ್ನು
ಜವಾಗಿ ಅರಿತವರು ಪುನರ್ವಿವಾಹದ ಮಾತನ್ನು ಮನದಲ್ಲಿ ಕೂಡ ತಾರ
ಂದು ನನ್ನ ಅಭಿಪ್ರಾಯ." ಎಂದು ಆಕೆ ನುಡಿದು, ತಗ್ಗಿದ ಮೊಗದಿಂದ
ುಸಿರೊಂದನ್ನು ಬಿಟ್ಟಳು.

"ನಿಮ್ಮ ಕಲ್ಪನೆಯಂತೆ ವಿವಾಹದ ಗುಟ್ಟು ಏನಿರುವುದು?" ನಾನು
ೇಳಿದೆ.

ಕರುಣರಸವು ತುಂಬಿದ್ದ ನೆಟ್ಟ ನೋಟದಿಂದ ಆಕೆ ನನ್ನನ್ನು ನೋಡಿ
ದಳು. ಎಳೆದು ತಂದ ಕಿರುನಗೆಯೊಡನೆ ಮಾತನಾಡಲು ತೊಡಗಿದಳು:

"ವಿವಾಹವೆಂದರೆ ಅದೊಂದು ಪ್ರೇಮಪೂಜೆಯ ಪ್ರಾಸ್ತಾವಿಕ
ಾರ್ಯ. ಇದಾದೊಡನೆಯೆ ದಂಪತಿಗಳು, ಒಬ್ಬರೊಬ್ಬರ ಪ್ರೇಮದಿಂದ
ಬ್ಬರೊಬ್ಬರಿಗೆ ಪೂಜೆಗಟ್ಟಿ, ಇಹಲೋಕದಲ್ಲಿಯೇ ಶಾಂತಿಸೌಖ್ಯಗಳನ್ನು
ಪಡೆಯುವರು. ಇದು ವಿವಾಹದ ಉದ್ದೇಶ, ಗುರಿ. ಪೂಜೆಗಾಗಿ ಇಂದೊಬ್ಬ
ದೇವರು, ನಾಳೆಗೊಬ್ಬ ದೇವರಾದರೆ ನಡೆದೀತೆ? ಪುನರ್ವಿವಾಹ ಹೆಂಗುಸರಿ
ಗಷ್ಟೇ ಅಲ್ಲ, ಗಂಡುಸರಿಗೆ ಕೂಡ ಯುಕ್ತವಾದುದಲ್ಲವೆಂದು ನನ್ನ ಎಣಿಕೆ."

ಪುನರ್ವಿವಾಹ ಮಂಡನಪರವಾದ ಅನೇಕ ಗ್ರಂಥಗಳನ್ನು ನಾನು
ಓದಿದ್ದೇನೆ. ಉಪನ್ಯಾಸ ಕೇಳಿದ್ದೇನೆ. ಪುನರ್ವಿವಾಹವು ಆವಶ್ಯಕವೆಂದೇ ನನ್ನ
ಮತ. ಅಂದು ಆಕೆಯಾಡಿದ ಒಂದೇ ಒಂದು ಮಾತಿನಿಂದ, ನನ್ನ ಮತವು
ಂತಲ್ಲಿ ನಿಲ್ಲದೆ ಅಲ್ಲಾಡತೊಡಗಿತು. ಇನ್ನೊಂದು ಮಾತು, ಈ ಮಾತಿನಿಂದ
ಆಗಾಗ ನನ್ನ ಎದೆಯನ್ನಳುಕಿಸುತ್ತಲಿದ್ದ ಅಂಜಿಕೆಯೊಂದು ದೂರವಾಗಿ
ಬಿಟ್ಟಿತು ಇನ್ನಿಷ್ಟು ನಿಶ್ಚಿಂತನಾದೆ.

ಪುನರ್ವಿವಾಹದ ವಿಚಾರದಲ್ಲಿ ತನ್ನ ನಿರ್ಣಯವನ್ನು ಹೇಳುತ್ತಿರು
ಾಗ, ಆಕೆ ತನ್ನ ಅನುಭವದ ಮಾತುಗಳನ್ನೇ ಹೇಳುತ್ತಿದ್ದಾಳೆಂದು ನನಗೆ
ನಿಸಿತು. ಆ ಮಾತುಗಳಲ್ಲಿ ತಿರುಳು ತುಳುಕುತ್ತಿದೆಯೆಂದು ತೋರಿತು.
ುತ್ತೊಮ್ಮೆ ಆ ಮಾತುಗಳನ್ನು ಕೇಳಬೇಕೆಂಬ ಬಯಕೆಯುಂಟಾಯಿತು.
ಕೆ ಯಾವ ಮಾತುಗಳನ್ನಾಡಿದರೂ ಹೀಗೆಯೇ, ಒಂದೊಂದು ಬಗೆಯ
ೊಗಸಿನಿಂದ ಕೂಡಿರುವುವು. ಆಕೆಯು ಸಂಸ್ಕಾರ ಹೊಂದಿದ ಬುದ್ಧಿಗಾಗಿ–

ಅನುಭವಕ್ಕಾಗಿ – ನನಗೆ ತುಂಬಾ ಆಶ್ಚರ್ಯ. ನನಗೊಂದು ಒಳ್ಳೆಯ
ವ್ಯಕ್ತಿಯ ಪರಿಚಯವಾದಂತಾಯಿತಲ್ಲ–! ಎಂದು ಹೆಚ್ಚಾಗಿ ಹಿಗ್ಗಿ.

೬

ಆರೇಳು ದಿನಗಳನ್ನು ಆಕೆಯ ಒಡನಾಟದಲ್ಲಿ ಹಿಗ್ಗಿನಿಂದ ಕಳೆದ
ಬಳಿಕ ಒಂದು ದಿನ ನಾನು ರಾತ್ರಿಯ ಊಟಕ್ಕೆ ಕುಳಿತಿದ್ದೆ. ತಾಯಿ ಊಟಕ
ನೀಡುತ್ತಿದ್ದಳು. ಇನ್ನೇನು, ಊಟ ಮುಗಿಯಲು ಬಂದಿದ್ದಿತು – ತಾಯಿ
ತಗ್ಗಿದ ದನಿಯಲ್ಲಿ ನುಡಿದಳು:

“ಕಿಟ್ಟಾ! ನಿನ್ನ ಹೆಂಡತಿಗೆ ಶೂಲಿ, ನೋವು ನಸು ಕಡಿಮೆಯಾಗಿ
ಯೇನೋ! ಎರಡು ಮೂರು ದಿನ ನರಳಾಟ ಕೇಳುತ್ತಿರುವುದಿಲ್ಲ. ಆದ
ಅದೇತಕ್ಕೋ ತಿಳಿಯೆ, ಎರಡು ಮೂರು ದಿನಗಳಿಂದ ಊಟವನ್ನೆ ಸರಿಯಾ
ಮಾಡಲೊಲ್ಲಳಪ್ಪಾ.”

“ಅದೇನು? ನೋವಿನಿಂದ ನರಳುತ್ತಿದ್ದಾಗ ಕೂಡ ತಕ್ಕಮಟ್ಟ
ಊಟಮಾಡುತ್ತಿದ್ದಳಲ್ಲವೇ?” ಗಾಬರಿಯಾಗಿ ನಾನು ಕೇಳಿದೆ.

“ಏನೋ ಅಪ್ಪಾ! ಊಟವೆ ರುಚಿಹತ್ತುವುದಿಲ್ಲವೆಂದು ಹೇಳುತ್ತಾಳೆ
ಇಷ್ಟವೆನಿಸಿದುದನ್ನು ಹೇಳು, ಮಾಡಿ ಹಾಕುತ್ತೇನೆ; ಎಂದು ನಾನು ಎಷ್ಟೊ
ಹೇಳಿದೆ. ಕೇಳಿದುದೆಲ್ಲಕ್ಕೂ ಮೂಗು ಮುದುಡಿಸುತ್ತಾಳೆ.”

ಎದೆಯಲ್ಲಿ ಪಡಪಡಿಸಿತು. ಬೇಸತ್ತವನಾಗಿ ವಿರಕ್ತ ಭಾವದಿಂದ ಮಾ
ನಾಡಿದೆ: “ಪ್ರಾರಬ್ಧ ನಮ್ಮದು. ಬಂದುದನ್ನು ಭೋಗಿಸಲೇ ಬೇಕಷ್ಟೆ?
ಎಷ್ಟೇ ವಿರಕ್ತಿಯ ಮಾತನ್ನಾಡಿದರೂ ನಿಟ್ಟುಸಿರನ್ನು ತಡೆಯುವುದಕ್ಕೇನ
ಆಗಲಿಲ್ಲ. ನಾನು ಊಟವನ್ನು ತೀರಿಸಿಕೊಂಡು ಎದ್ದೆ. ತಾಯಿ ಕಳೆಯಿಳಿ
ಮುಖದಿಂದ ತನ್ನ ಕೆಲಸಕ್ಕೆ ತೊಡಗಿದಳು.

ನಾನು ಕೈಕಾಲು ತೊಳೆದುಕೊಂಡು, ಹಾಗೆಯೆ ನನ್ನ ಹೆಂಡ
ಮಲಗಿದ್ದ ಕಿರುಮನೆಯೊಳಕ್ಕೆ ಹೋದೆ. ಮಲಗಿದ್ದಾಕೆಯ ತ
ಪಕ್ಕದಲ್ಲಿಯೇ ಕುಳಿತೆ.

“ಏನು, ಇಂದು ಹೇಗಿದೆ? ಸರಿಯಾಗಿದೆಯೇ?”

“ಸ-ರಿ-ಯಾ-ಗಿ-ದೆ.” ಜಡವಾದ ದನಿ. ಮಾತಿನೊಡನೆಯೆ
ನಿಟ್ಟುಸಿರು.

"ಮೂರು ನಾಲ್ಕು ದಿನಗಳಿಂದ ನೀನು ಊಟವನ್ನು ಸರಿಯಾಗಿ ಮಾಡುವುದಿಲ್ಲವಂತೆ, ಅಮ್ಮ ಹೇಳಿದಳು." ನಾನು ಮೆಲ್ಲಗೆ ನುಡಿದೆ. ಮುಖಕ್ಕೆ ತೋಳನ್ನು ಮರೆಮಾಡಿಕೊಂಡು ಮಲಗಿದ್ದಳು. ನನ್ನ ಮಾತಿಗೆ ಮರುನುಡಿ ಬರಲಿಲ್ಲ.

"ಏನು, ಮೈಯಲ್ಲಿ ಚೆನ್ನಾಗಿಲ್ಲವೇ? ಮತ್ತೇನಾಗುತ್ತಿದೆ?" ಈ ಮಾತಿಗೂ ಉತ್ತರ ದೊರೆಯಲಿಲ್ಲ ಮುಖಕ್ಕೆ ಮರೆಯಾಗಿದ್ದ ತೋಳನ್ನು ಪಕ್ಕಕ್ಕೆ ಸರಿಸಿದೆ. ಕಣ್ಣಲ್ಲಿ ನೀರು ತುಂಬಿದ್ದಿತು. ಮೂಗಿನುಸಿರು ಒತ್ತರದಿಂದ ಆಡುತ್ತಿದ್ದಿತು

ನಾನು ಗಾಬರಿಗೊಂಡವನಾಗಿ ಕೇಳಿದೆ: "ಇದೇನು? ಕಣ್ಣಲ್ಲಿ ನೀರೇಕೆ? ಏನಾಯಿತು?"

ಬಿಗಿದುಬರುತ್ತಿರುವ ಕಂಠದಿಂದ ಆಕೆ ಹೇಳಿದಳು: "ಏನೂ ಆಗಿಲ್ಲ." ಒಂದೇ ಮಾತಿನ ಉತ್ತರ. ಮುಂದೆ ಮಾತೇ ಇಲ್ಲ.

"ಹಾಗಾದರೆ ಊಟವನ್ನೇತಕ್ಕೆ ಸರಿಯಾಗಿ ಮಾಡಲೊಲ್ಲೆ? ಏನಾಗುತ್ತಿದೆ? ಬಾಯಿಬಿಚ್ಚಿ ಹೇಳಬಾರದೇ?"

ಉತ್ತರವೇ ಇಲ್ಲ. ಕಣ್ಣಲ್ಲಿ ತುಂಬಿದ ಕಂಬನಿ ತುಳುಕಿ, ಗಲ್ಲದಗುಂಟ ಇಳಿದುವು. ನಾನು ಅಪ್ರತಿಭನಾದೆ. ಯಾವುದೂ ತಿಳಿಯದಂತಾಯಿತು. ಇನ್ನಿಷ್ಟು ಹತ್ತಿರ ಹೋಗಿ, ಉತ್ತರೀಯದ ಸೆರಗಿನಿಂದ ಕಂಬನಿಗಳನ್ನು ಒರಸಿದೆ. ನಾನು ಅದೆಷ್ಟೆಷ್ಟು ಸಂತಯಿಸಿ ಕೇಳಿದರೂ ಮರುಮಾತುಗಳೇ ಇಲ್ಲ. ಬೇಸತ್ತು ಮಾತನಾಡದೆ ಕುಳಿತೆ. ಐದಾರು ನಿಮಿಷಗಳ ವರೆಗೆ ಇಬ್ಬರಿಗೂ ಮೌನವ್ರತ. ಬಳಿಕ ದೈನ್ಯವು ಬೆರೆತ ನೋಟದಿಂದ ಆಕೆ ಕಣ್ಣರಳಿಸಿ ನನ್ನನ್ನು ನೋಡಲು ತೊಡಗಿದಳು. ಮಾತನಾಡಲು ಹವಣಿಸುತ್ತಿರುವಂತೆ ಮುಖಭಾವ ತೋರಿತು. ಆಗ ನಾನು ಆಕೆಯ ಬಲಗೈಯನ್ನು ಎತ್ತಿ ತೊಡೆಯಲ್ಲಿಟ್ಟುಕೊಂಡು ಅದರ ಮೇಲೆ ಸುಮ್ಮನೆ ಕೈಯನ್ನಾಡಿಸಲು ತೊಡಗಿದೆ. ಇಬ್ಬರ ನೋಟಗಳೂ ಒಂದಾಗಿದ್ದುವು. ನಡುಗುತ್ತಿರುವ ದನಿಯಿಂದ ಆಕೆ ಕೇಳಿದಳು:

"ನಮ್ಮ ಮನೆಗೆ ಆಗಾಗ ಬರುತ್ತಾಳಲ್ಲ! ಆ ಹೆಂಗುಸು ತುಂಬಾ ಚೆಲುವೆಯಾಗಿದ್ದಾಳಲ್ಲವೇ?"

ಆಕೆಯ ಮಾತುಗಳನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಈಗ ಈ

ಪ್ರಶ್ನೆಯೇತಕ್ಕೆಂಬುದನ್ನು ತಿಳಿದವನಾದೆನು. ಆದರೂ ನಾನು ಸಮಾಧಾನ ದಿಂದಲೆ ನುಡಿದೆ:"ಅಹುದು ಚೆಲುವೆಯಾಗಿದ್ದಾಳೆ. ಈ ಪ್ರಶ್ನೆಯೇತಕ್ಕೀಗ?"

"ಏನೋ! ಸುಮ್ಮನೆ ಕೇಳಿದೆ." ಮಾತಿನೊಡನೆ ವಿಷಾದದ ನಗೆ. "ಅವಳೇನೊ ಚೆಲುವೆಯಾಗಿದ್ದಾಳೆ. ನಿನ್ನ ಚೆಲುವಿಕೆ ಕಡಿಮೆಯಿದೆಯೇ! ನೀನೂ ಚೆಲುವೆಯಲ್ಲವೇ?" ನಾನು ಕಿರುನಗೆ ನಗುತ್ತ ಸರಸ ಮಾತು ಗಳನ್ನಾಡಿದೆ.

"ನನ್ನ ಚೆಲುವಿಕೆ ತೆಗೆದುಕೊಂಡು ಮಾಡುವುದೇನು? ಕಾಡಿನ ಬೆಳುದಿಂಗಳು!" ಎಂದು ಮಾತನಾಡಿ ಆಕೆ ನಿಟ್ಟುಸಿರಿಟ್ಟಳು. ಕಣ್ಣೀರು ಇನ್ನಿಷ್ಟು ತುಳುಕಿತು. ಆಕೆಯಾಡಿದ ಮಾತಿನ ರೀತಿ ನನ್ನ ಎದೆಯನ್ನು ಅಲ್ಲಾಡಿಸಿತು. ನನಗೇನೋ ಆಗ ಕೊಂಚ ಬೆಳಕುಬಿದ್ದಿತು. ಊಟವನ್ನು ಸರಿಯಾಗಿ ಮಾಡದಿದ್ದ ಕಾರಣದ ಬೇರು ದೊರೆತಂತಾಯಿತು. ನಾನು ಕೊಂಚ ವೇಳೆ ಸುಮ್ಮನೆ ಕುಳಿತುಬಿಟ್ಟೆ. ಆಕೆ ಮತ್ತೆ ಕಂಪಿಸುತ್ತಿರುವ ಕಂಠದಿಂದ ಮಾತನಾಡಿದಳು:

"ಅವಳು ಚೆಲುವೆಯೂ ಅಹುದು. ತುಂಬ ಓದಿದವಳೂ ಅಹುದು. ನಿಮ್ಮೊಡನೆ ಎಷ್ಟೆಷ್ಟೊ ಜಾಣತನದ ಮಾತುಕತೆಯಾಡುತ್ತಿರುತ್ತಾಳೆ." ನನ್ನೆದೆಯಲ್ಲಿ ಚುಚ್ಚಬೇಕೆಂದು ಬಿಡುತ್ತಲಿದ್ದ ವಾಗ್ಬಾಣಗಳವು. ಈ ಎರಡನೆಯ ಮಾತಿನಿಂದ ಮೊದಲು ಬಿದ್ದ ಬೆಳಕಿಗೆ ಇನ್ನಿಷ್ಟು ಮಿರುಗು ಕೊಟ್ಟಂತಾಯಿತು.

"ಹುಚ್ಚಿ ನೀನು. ಏನೇನೋ ಹುಚ್ಚುಹುಚ್ಚಾಗಿ ಸಂಶಯಪಟ್ಟು ಕೊಂಡು ಎದೆಯಲ್ಲಿ ಕುದಿಯುತ್ತೀ." ನಾನು ನಿರ್ಮಲಹೃದಯದಿಂದ ಹೇಳಿದೆ. ಆದರೆ ಇದಿಷ್ಟೇ ಮಾತಿನಿಂದ ಆಕೆಯ ಸಂಶಯವನ್ನು ಕಳೆದು ಬಿಡುವುದಕ್ಕೆ ಸಾಧ್ಯವೇ!

ಮಾತನಾಡುವುದಾದ ಮೇಲೆ ಆಕೆ ಸುಮ್ಮನೆ ನನ್ನನ್ನು ನೋಡುತ್ತಿದ್ದಳು. ಆ ನೋಟ ನನ್ನೆದೆಯ ಒಳಹೊಕ್ಕು ನೋಡಿ, ವಸ್ತುಸ್ಥಿತಿಯನ್ನವಳಿಗೆ ತಿಳುಹಿಸಬಾರದೆ!– ಎಂದು ಭಾವಿಸಿದೆ. ನಾನೊಂದು ದೊಡ್ಡ ಗಂಡಾಂತರ ದಲ್ಲಿ ಸಿಕ್ಕುಬಿದ್ದೆ. ಅದರಿಂದ ಪಾರಾಗುವ ಬಗೆಯನ್ನೇ ಕಾಣದವನಾದೆ. ಹಂಚಿಕೆಗಾಣದೆ ದೈನ್ಯಧ್ವನಿಯಲ್ಲಿ ಮಾತನಾಡಿದೆ:

"ನಾನು ಆಣೆಮಾಡಿ ಹೇಳಿದರೆ ನಿನ್ನ ಸಂಶಯ ದೂರವಾಗುವುದೇ?"

"ಆಣೆಬೇಡ ಪಾಣೆಬೇಡ; ನನ್ನದೇನು ಸಂಶಯ ?" ಎಂದು ನುಡಿದು ಆಕೆ ಮುಖವನ್ನು ಬೇರೆ ಕಡೆಗೆ ತಿರುಗಿಸಿದಳು. 'ನೀವು ಏನು ಹೇಳಿದರೂ ನನಗೆ ನಿಜವೆನಿಸದು' ಎಂಬುದು ಆಕೆಯ ಆಗಿನ ಭಾವ.

ಏನು ಮಾತನಾಡಬೇಕೆಂಬುದು ನನಗೆ ತಿಳಿಯದೆ, ಸುಮ್ಮನೆ ನುಡಿದುಬಿಟ್ಟೆ. "ಹುಚ್ಚಿಯಿರುತ್ತೀ ನೀನು."

"ಅಹುದು ನಾನು ಹುಚ್ಚಿ; ಎಂತಲೇ........" ಮತ್ತೆ ಕೊಂಕುನುಡಿ.

"ಅರ್ಧಕ್ಕೆ ಮಾತು ನಿಲ್ಲಿಸಿದೆಯೇಕೆ? ಏನು ಅನ್ನಬೇಕಾಗಿದೆಯೋ ಅಂದುಬಿಡು. ಒಂದನ್ನೂ ಬಚ್ಚಿಡಬೇಡ."

"ನಾನು ಏನೂ ಅನ್ನಬೇಕಾಗಿಯೂ ಇಲ್ಲ, ಬಚ್ಚಿಡಬೇಕಾಗಿಯೂ ಇಲ್ಲ." ಮತ್ತೆ ಕಣ್ಣುಗಳಲ್ಲಿ ನೀರು ಹರಿಯಿತು, ಕೊರಳ ಸಿರ ಬಿಗಿದು ಬಂದಿತು.

"ಇಲ್ಲದ ಕಲ್ಪನೆಗಳನ್ನು ತಲೆಯಲ್ಲಿ ತುಂಬಿಕೊಂಡು ಸುಮ್ಮನೆ ಹಣ್ಣಾಗಬೇಡ. ನನ್ನ ಹೃದಯ ದೇವರಿಗೆ ಗೊತ್ತು. ಆ ಹೆಂಗುಸಿನ ಯೋಗ್ಯತೆ ನಿನಗೆ ತಿಳಿಯದು. ಆಕೆಯ ವಿಷಯದಲ್ಲಿ ಸಲ್ಲದ ಕಲ್ಪನೆ ಮಾಡಿಕೊಂಡರೆ ನಮಗೆ ಒಳ್ಳೆಯದಾಗದು" ಎಂದು ಬೇಸತ್ತ ದನಿಯಲ್ಲಿ ಮಾತನಾಡಿದೆ. ನಿರುಪಾಯನಾಗಿ ಹಾಗೆಯೇ ಎದ್ದು ನಡೆದುಬಿಟ್ಟೆ. ನಾನು ಹೊರಕ್ಕೆ ಹೊರಟು ಬಂದೊಡನೆಯೆ ತಾಯಿ ಆಕೆಗೆ ಊಟಕ್ಕೆ ಹಾಕುವುದಕ್ಕೆಂದು ಅಲ್ಲಿಗೆ ಹೋದಳು. ನಾನು ನನ್ನ ಕಿರುಮನೆಯಲ್ಲಿ ಬಂದು, ಕುರ್ಚಿಯ ಮೇಲೆ ಬಿದ್ದುಕೊಂಡುಬಿಟ್ಟೆ. ತಾಯಿ, ಹೆಂಡತಿ ಬಹಳಹೊತ್ತಿನವರೆಗೆ ಪಿಸುಮಾತುಗಳನಾಡುತ್ತಿದ್ದಂತೆ ಕಂಡುಬಂದಿತು. ನನ್ನ ಚಿಂತೆಯಲ್ಲಿ ನಾನು ಕುಳಿತಿದ್ದೆ. ಅದರ ಕಡೆಗೆ ಅಷ್ಟೊಂದು ಮನಸ್ಸನ್ನೇ ಕೊಡಲಿಲ್ಲ.

ಅಂದಿನ ಇರುಳೆಲ್ಲವೂ ನನಗೆ ನಿದ್ದೆಯಿಲ್ಲ. ಆ ಮಗ್ಗಲಿನಿಂದ ಈ ಮಗ್ಗಲಿಗೆ ಈ ಮಗ್ಗಲಿನಿಂದ ಆ ಮಗ್ಗಲಿಗೆ ಹೊರಳಾಡುತ್ತ, ನಡುನಡುವೆ ನಿಡಿದಾಗಿ ಉಸಿರುಗಳನ್ನು ಹಾಕುತ್ತ ಇರುಳನ್ನು ಕಳೆದೆನು. 'ಈಗ ನಾನೇನು ಮಾಡಬೇಕು?' ಎಂಬುದರ ಬಗೆಗೆ ನಿರ್ಣಯವನ್ನು ಕಾಣದೆ ತಳಮಳಗೊಳ್ಳುತ್ತಿದ್ದೆನು.

೭

ಮರುದಿನ ಬೆಳಗಿನಲ್ಲಿ ಎಂದಿನಂತೆಯೆ ಕನಕಮ್ಮ ಬಂದಳು. ಜೊತೆಗೆ ಆ ಹೆಂಗುಸೂ ಇದ್ದಳು. ನಮ್ಮ ತಾಯಿ ಆಕೆಯನ್ನು ದೂರದಿಂದಲೆ ದುರುಗುಟ್ಟುವ ನೋಟದಿಂದ ನೋಡಿಯೇ ನೋಡಿದಳು. ಬಳಿಕ ಇದ್ದ ಬಿದ್ದ ಹಾಗೆಯೆ ತಿರುಗಿ ಒಳಕ್ಕೆ ಹೋಗಿಬಿಟ್ಟಳು. ಅಂದು ನಾನು ಚೆನ್ನಾಗಿ ಪರೀಕ್ಷೆಮಾಡಿ ನೋಡಿದೆ. ಆ ಹೆಂಗುಸು ಏನನಾದರೂ ಉಪಚಾರ ಮಾಡಲು ಮುಂದುವರಿದು ಹೋದರೆ, ನನ್ನ ಹೆಂಡತಿ ಜುಗುಪ್ಸೆಪಟ್ಟು ಕೊಂಡು ಮುಖವನ್ನು ಗಂಟುಹಾಕುತ್ತಿದ್ದಳು. ಆಕೆ ಅದೆಷ್ಟೋ ಅಂತಃ ಕರಣದಿಂದ— ಕನಕಮ್ಮನಿಗಿಂತಲೂ ಹೆಚ್ಚು ಮನಸ್ಸುಗೊಟ್ಟವಳಾಗಿ— ಔಷಧೋಪಚಾರ ಮಾಡುತ್ತಿದ್ದಳು. ಆಕೆಯ ಉಪಚಾರದ ಬಗೆಯನ್ನೂ ನೋಡಿದೆ, ನನ್ನ ಹೆಂಡತಿ ಜುಗುಪ್ಸೆಪಡುತ್ತಿರುವುದನ್ನೂ ನೋಡಿದೆ ಎದೆ ಯಲ್ಲಿ ಅದೇನೊ ಒಂದು ಬಗೆಯ ಗಲಿಬಿಲಿಯೆದ್ದಂತಾಯಿತು. ಅಲ್ಲಿ ನಿಲ್ಲು ವುದಕ್ಕೆ ಮನಸ್ಸು ಒಲ್ಲದಾಯಿತು. ಕಿರುಮನೆಗೆ ಹೊರಟು ಹೋದೆ. ಯಾವುದನ್ನೂ ನೆಲೆಗಾಣದವನಾಗಿ, ಮೂಗಿನ ಮೇಲೆ ಬೆರಳಿಟ್ಟುಕೊಂಡು ಕುಳಿತುಬಿಟ್ಟೆ. ಬಂದವರಿಬ್ಬರೂ ತಮ್ಮ ಕೆಲಸ ತೀರಿಸಿಕೊಂಡು ಹೊರಟು ಹೋದರೇನೋ!

ಅಂದು ಮಧ್ಯಾಹ್ನ ಊಟಕ್ಕೆ ಕುಳಿತೆ. ಅನ್ನದಲ್ಲಿ ರುಚಿಯೆ ತೋರಲಿಲ್ಲ ದಿನದಂತೆ ಉಣ್ಣುವುದಕ್ಕಾಗಲಿಲ್ಲ. ನನ್ನ ತಾಯಿ ಹಂಗಿಸುವ ಕೊಂಕುನುಡಿಯಲ್ಲಿ ನುಡಿದಳು.

“ಸರಿ! ನಿನಗೇನಾಯಿತಪ್ಪಾ ಮತ್ತೆ? ನೀನೂ ಉಣ್ಣುವುದನ್ನು ಬಿಟ್ಟುಬಿಟ್ಟೆ?” ನನ್ನ ಹೆಂಡತಿ ಏನೇನೋ ಹೇಳಿ ತಾಯಿಯ ಮನಸ್ಸನ್ನೂ ಕೆಡಿಸಿಬಿಟ್ಟಿರುವಳೆಂಬುದನ್ನು ಈ ಮಾತಿನಿಂದ ನಿರ್ಣಯಿಸಿದೆ. “ಇಂದು ಅದೇ ತಕ್ಕೋ ಮೈಯಲ್ಲಿ ಸರಿಯಾಗಿಲ್ಲ.” ಎಂದಿಷ್ಟೇ ಹೇಳಿ ಎದ್ದುಬಿಟ್ಟೆ. ತಾಯಿ ಕೋಪಗೊಂಡ ನೋಟದಿಂದ ನಾನು ಎದ್ದು ಹೋಗುತ್ತಿರುವುದನ್ನು ನೋಡುತ್ತಿದ್ದಳು.

* * * * *

ಹಗಲು ಮೂರುವರೆ ಗಂಟೆಯಾಗಿರಬಹುದು. ನಾನು ನನ್ನ ಕಿರು

ಮನೆಯಲ್ಲಿಯೇ ಕುಳಿತಿದ್ದೆ. "ಈಗ ಆಕೆ ಬರಬಹುದು. 'ನಾಳೆಯಿಂದ ದಯವಿಟ್ಟು ನಮ್ಮ ಮನೆಗೆ ಬರಬೇಡಿ ಅಮ್ಮಾ!' ಎಂದು ಆಕೆಗೆ ಹೇಳಿ, ನಡೆದ ಸಂಗತಿಯನ್ನೆಲ್ಲ ತಿಳುಹಿಸಿಬಿಡಲೇ!" ಎಂದು ಯೋಚಿಸಿದೆ. "ಅಂತಹ ಸಹೃದಯಳ ಸಹವಾಸ ತಾನಾಗಿಯೆ ಸಿಕ್ಕಿರಲು, ಅದನ್ನು ಕಳೆದುಕೊಳ್ಳುವ ನಾನು ಅದೆಂತಹ ಅದೃಷ್ಟಹೀನ!" ಎಂದು ಅಂದುಕೊಂಡೆ. "ಹಾಗಾದರೆ ಅವಳಿಗಾಗಿ ಈಗ ಕೈಹಿಡಿದ ಹೆಂಡತಿ ಸವೆದು ಸಣ್ಣಾಗುತ್ತಿರುವಳಲ್ಲ! ಇದಕ್ಕೇನು ಗತಿ?" ಎಂದು ಚಿಂತಿಸಿದೆ. "ಆಕೆಗೆ ಎಲ್ಲವನ್ನೂ ಹೇಳಿ-ಮನೆಗೆ ಬರಬೇಡಿ-ಎಂದು ಹೇಳಿಬಿಟ್ಟರೆ ಆ ಸಾಧ್ವಿಯ ಮನಸ್ಸು ಎಷ್ಟು ಮರುಗುವುದೋ!" ಎಂಬ ಯೋಚನೆಯಿಂದ ಹಣ್ಣಾದೆ. ಯಾವ ಮಾತಿನದೂ ನಿರ್ಣಯವಾಗಲೊಲ್ಲದು. ಶೂನ್ಯದೃಷ್ಟಿಯವನಾಗಿ ಆರಾಮಕುರ್ಚಿಯ ಮೇಲೆ ಸುಮ್ಮನೆ ಬಿದ್ದುಬಿಟ್ಟಿದ್ದೆ. ಸಹಜವಾದ ಮುಗುಳುನಗೆಯ ಮೊಗದಿಂದ ಆ ಹೆಂಗುಸು ಒಳಕ್ಕೆ ಬಂದುಬಿಟ್ಟಳು. ನಾನು ಹಾರಿ ಬಿದ್ದುಬಿಟ್ಟೆ. ಕೂಡಲೆ ಎದ್ದುನಿಂತು ಆಕೆಯನ್ನು ಆದರದಿಂದ ಬರಮಾಡಿಕೊಂಡೆ.

ಆಕೆ ಕೊಂಚ ಆತುರದ ಮಾತಿನಲ್ಲಿ ಕೇಳಿದಳು. "ಇದೇನು? ತುಂಬಾ ಯೋಚನೆಯಲ್ಲಿದ್ದಂತೆ ತೋರುತ್ತಿದೆ. ನಿಮ್ಮ ಹೆಂಡತಿ ಸೌಖ್ಯವಾಗಿದ್ದಾರೆ ತಾನೇ?"

"ಸೌಖ್ಯವಾಗಿದ್ದಾಳೆ. ಯೋಚನೆಯೇನೂ ಇಲ್ಲ. ನಮ್ಮಂತಹ ಪುಸ್ತಕದೊಳಗಿನ ಹುಳುಗಳಿಗೆ, ಮೈ ಸುಮ್ಮನೆ ಕುಳಿತಿದ್ದರೂ ಮನವೆಲ್ಲಿ ಸುಮ್ಮನೆ ಕುಳಿತಿರುತ್ತದೆ? ಯಾವುದಾದರೊಂದು ತೊಡಕನ್ನು ತಂದು ಬಿಡಿಸುತ್ತಿರುವುದೇ ಅದರ ಕೆಲಸ." ನಾನು ಕೈಗಡ ತಂದ ನಗುಮೊಗದಿಂದ ವಸ್ತುಸ್ಥಿತಿಯನ್ನು ಮರೆಯಿಸಿ ಮಾತನಾಡಿಬಿಟ್ಟೆ.

"ಅದೇನೋ ಸರಿಯೇ! ಮುಖ ಕೊಂಚ ಬಾಡಿದಂತೆ ಕಂಡಿತು. ಕೇಳಿದೆ-ಯೋಚನೆಯೇನು-ಎಂದು. ನಮ್ಮ ನಂಗಣ್ಣ ಎಲ್ಲಿದ್ದಾನೆ?" ಆಕೆ ಮಾತನಾಡಿದಳು. ನನ್ನ ಮಗುವಿನ ಹೆಸರು 'ರಂಗನಾಥ' ಎಂದು. ಆಕೆ ಮುದ್ದಿನಿಂದ 'ನಂಗಣ್ಣ' ಎಂದು ಹೇಳುವಳು.

"ಒಳಕ್ಕೆ ಮಲಗಿಕೊಂಡಿದ್ದಾನೇನೋ!" ನಾನು ಹೇಳಿದೆ.

ಹೀಗೆ ಹೇಳುತ್ತಿದ್ದಾಗಲೆ ನಮ್ಮ ತಾಯಿ, ತಟ್ಟನೆ ಕಿರುಮನೆಯ ಒಳಬಾಗಿಲಲ್ಲಿ ಬಂದು ನಿಂತಳು. ಕೋಪದ ಕೆಂಗಣ್ಣಿಂದ ನನ್ನನ್ನೊಮ್ಮೆ ಆಕೆ

ಯನ್ನೊಮ್ಮೆ ದುರುಗುಟ್ಟಿ ನೋಡಿದಳು. ಏನೇನು ಅವಾಂತರ ನಡೆಯು ವುದೋ ಎಂದು ನನ್ನ ಹೃದಯ ತಲ್ಲಣಿಸಿತು. ಮನವು ಅಸ್ಥಿರವಾಯಿತು. ಮುಖವು ಗಾಬರಿಗೊಂಡಿತು.

"ಇದೇನೋ ಕಿಟ್ಟಾ! ಹರಯದ ಹೆಂಗುಸರನ್ನು ಕರೆದುಕೊಂಡು ಬಂದು ಇಲ್ಲಿ ಕೂಡಿಸಿಕೊಳ್ಳುತಿರುವುದು ನನಗೇನೂ ಸರಿಬೀಳುವುದಿಲ್ಲ ನೋಡು! ಹೇಳುವ ಕೇಳುವ ಹಿರಿಯರಾರೂ ಇಲ್ಲವೇ ನಿನಗೆ?" ಕರ್ಕಶ ವಾದ ಸ್ವರದಲ್ಲಿ ತಾಯಿ ಮಾತನಾಡಿದಳು.

ನಾನು ಒಂದು ಮಾತನ್ನೂ ಆಡದೆ ದೈನ್ಯದ ನೋಟದಿಂದ ತಾಯಿಯ ಕಡೆಗೆ ನೋಡುತ್ತ ಕುಳಿತೆ. ಮಧ್ಯೆ ಒಂದುಸಲ ಆ ಹೆಂಗುಸನ್ನು ನೋಡಿದೆ. ಹುಚ್ಚಿಟ್ಟ ಮೊಗದಿಂದ ನನ್ನ ಕಡೆಗೊಮ್ಮೆ ತಾಯಿಯ ಕಡೆಗೊಮ್ಮೆ ನೋಡುತ್ತ ಸುಮ್ಮನೆ ಕುಳಿತಿದ್ದಳು.

ತಾಯಿ ತನ್ನ ಮೊದಲಿನ ದನಿಯಲ್ಲಿಯೆ ಆ ಹೆಂಗುಸನ್ನು ಉದ್ದೇಶಿಸಿ ನುಡಿದಳು. "ಏನಮ್ಮಾ! ನಿನಗಾದರೂ ತಿಳಿಯಬಾರದೇ? ಸಂಸಾರಿಕರ ಮನೆಯಿದು. ಒಬ್ಬಳೇ ಒಬ್ಬಳು ಬಂದು, ಹೊತ್ತಿಲ್ಲ-ವೇಳೆಯಿಲ್ಲ-ಗಂಡಸಿನ ಜೊತೆಯಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದೀಯೇ. ನೀನೇನು ಅಕ್ಕನೇ! ತಂಗಿಯೇ! ಹತ್ತಿದವಳೇ! ಹೊಂದಿದವಳೇ! ಹಗಲೆಲ್ಲ ಏತಕ್ಕಮ್ಮಾ ಬರು ವುದು? ಇಲ್ಲಿ ನಿನ್ನದೇನು ಕೆಲಸ? ನೋಡಿದ ಜನರು ಏನೆಂದಾರೆಂಬ ಎಚ್ಚರವಾದರೂ ಇರಬಾರದೇ ನಿನಗೆ?"

ಆಕೆ ಯಾವ ಮಾತನ್ನೂ ಆಡದೆ, ನಿಟ್ಟುಸಿರೊಂದನ್ನು ಬಿಟ್ಟು, ಕಾತರ ಭಾವ ಬೆರೆತ ನೋಟದಿಂದ ನನ್ನ ಕಡೆಗೆ ನೋಡಲು ತೊಡಗಿದಳು. ನಾನು ಅವಳನ್ನು ನೋಡಲಾರದವನಾಗಿ ಕೆಳಕ್ಕೆ ಮುಖಮಾಡಿದೆ. ಬಳಿಕ ನಿಧಾನ ವಾಗಿ ಮುಖವನ್ನು ಮೇಲಕ್ಕೆತ್ತಿ ತಾಯಿಗೆ ಹೇಳಿದೆ: "ಅಮ್ಮಾ! ದಯ ವಿಟ್ಟು ಈಗ ಇಲ್ಲಿಂದ ಹೊರಟುಹೋಗಿ ಬಿಡು!"

"ಏನು ಹೊರಟು ಹೋಗುತ್ತಾರೋ! ಕೆಟ್ಟಕೆಟ್ಟವರ ಸಹವಾಸ ಮಾಡಿ, ಸಂಸಾರ ಕೆಡಿಸಿಗೊಂಡು ಕುಳಿತೀಯೆ. ನಾಚಿಕೆಯಿಲ್ಲ, ಮರ್ಯಾದೆ ಯಿಲ್ಲ! ಏನಮ್ಮಾ, ನಾನು ನಿಷ್ಠುರವಾಗಿ ಹೇಳಿಬಿಡುತ್ತೇನೆ. ನಾಳೆಯಿಂದ ನೀನು ಖಂಡಿತವಾಗಿಯೂ ನಮ್ಮ ಮನೆಗೆ ಬರಕೂಡದು-ತಿಳಿಯಿತೇನು?" ನನ್ನ ತಾಯಿಯ ಈ ಬಿರುನುಡಿಗಳನ್ನು ಕೇಳುವುದು ಅಸಹ್ಯವೆನಿಸಿತು.

"ಇರಲಿ, ಈಗ ನೀನು ಹೊರಟು ಬಿಡಮ್ಮಾ!" ನಾನು ಕೊಂಚ ಗಟ್ಟಿಯಾಗಿ ತಾಯಿಗೆ ನುಡಿದೆ.

"ಎಂತೆಂತಹ ಹುಚ್ಚುಮುಂಡೆಯರ ಸಹವಾಸ ನೋಡು...." ಎಂದು ಇನ್ನೂ ಏನೋ ತನ್ನಲ್ಲಿಯೆ ತಾನು ನುಡಿದುಕೊಳ್ಳುತ್ತ, ತಾಯಿ ಹೊರಟುಹೋದಳು.

'ನಾನು ನಿರಪರಾಧಿ' ಎಂಬ ಭಾವವನ್ನು ಸೂಚಿಸುವ ನೋಟದಿಂದ ಆ ಹೆಂಗುಸನ್ನು ನೋಡಲು ತೊಡಗಿದೆ. ಕಣ್ಣ ನೀರು ತುಳುಕುತ್ತಿದ್ದುವು. ಒಂದೆರಡು ಸಲ ಬೆರಳಿನಿಂದ ಮಿಡಿದೊಗೆದಳು. ನನ್ನ ಕರುಳಿಗೆ ಸಾವಿರಾರು ಚೇಳುಗಳು ಕುಟುಕಿದಂತಾಯಿತು.

ಬಿಗಿದು ಬರುತಿರುವ ಕಂಠದಿಂದ ಆಕೆ ಹೇಳಿದಳು. "ನಿಮ್ಮದೇನು ತಪ್ಪು? ನೀವು ನೊಂದುಕೊಳ್ಳಬೇಡಿ! ನಾನು ಹತಭಾಗಿನಿ; ಜೀವನದಲ್ಲಿ ಸುಖವನ್ನೇ ಬೇಡಿ ಬಂದಿಲ್ಲ. ಏನೋ ನಾಲ್ಕೆಂಟು ದಿನ-ಇದ್ದುದರಲ್ಲಿಯೆ ಹಾಯಾಗಿ-ಹೊತ್ತುಗಳೆಯುತ್ತಲಿದ್ದೆ. ದುರ್ದೈವದ ಮನಸ್ಸಿಗೆ ಅದೂ ಬರಲಿಲ್ಲ!" ಹೀಗೆ ಹೇಳುತ್ತಿರುವಾಗ ಆಕೆಗೆ ದುಃಖ ಉಕ್ಕಿಬಂದಿತು. ಅಷ್ಟಕ್ಕೇ ಮಾತನ್ನು ನಿಲ್ಲಿಸಿದಳು.

ನಾನು ಹುಚ್ಚನಂತಾಗಿ ಹೋಗಿದ್ದೆನು. ಏನು ಮಾತನಾಡಬೇಕೆಂಬುದೇ ತಿಳಿಯದಾಯಿತು. ನನ್ನ ಕಣ್ಣುಗಳಲ್ಲಿಯೂ ನೀರು ಹರಿದುವು. ಬಿಸಿಯಾದ ಉಸಿರೊಂದು ಬಾಯಿಂದ ಹೊರಬಿದ್ದಿತು.

ಆಕೆ ಕುರ್ಚಿಯನ್ನು ಬಿಟ್ಟು ಎದ್ದಳು. "ನಾನೀಗ ಹೊರಡುತ್ತೇನೆ. ದೈವದ ಮನಸ್ಸಿಗೆ ಬಂದರೆ ಮತ್ತೆ ಎಂದಾದರೂ ಕೂಡೋಣವೆಂತೆ" ಎಂದು ನುಡಿದವಳು ಹೊರಟೇಬಿಟ್ಟಳು. ನನ್ನ ಮರುಮಾತಿನ ದಾರಿಯನ್ನೆ ನೋಡಲಿಲ್ಲ.

ನಾನು ಅದೆಷ್ಟೋ ವೇಳೆಯವರೆಗೆ ಕುಳಿತಲ್ಲಿಯೇ ಕುಳಿತಿದ್ದೆ. ತಲೆಯಲ್ಲಿ ವಿಚಾರಗಳ ಗಲಾಟೆಯೋ ಗಲಾಟೆ. ಅಂದು ನಾನು ನೂರಾರು ನಿಟ್ಟುಸಿರುಗಳನ್ನು ಬಿಟ್ಟಿರಬಹುದು. ತಾಯಿಯು ಕೋಪಗೊಂಡು ಮತ್ತೆ ಕೂಗಾಡುವಳೆಂಬ ಹೆದರಿಕೆಯಿಂದ, ರಾತ್ರಿಯಿಲ್ಲಿ ನಾನು ಊಟಕ್ಕೇನೋ ಕುಳಿತೆ. ಆದರೆ ಒಂದೆರಡು ತುತ್ತುಗಳನ್ನೂ ನುಂಗುವುದಕ್ಕೆ ಆಗಲಿಲ್ಲ. ಹಾಗೆಯೇ ಎದ್ದುಬಿಟ್ಟೆ. ಉಪಾಯವಿಲ್ಲದೆ ಹೋಯಿತು, ಆಗ ಮತ್ತೊಮ್ಮೆ ತಾಯಿಯ

ಕೋಪಗೊಂಡ ಮುಖವನ್ನು ನೋಡಲೇಬೇಕಾಯಿತು, ಬಿರುನುಡಿಗಳನ್ನು ಕೇಳಲೇಬೇಕಾಯಿತು.

೮

ಸೂರ್ಯೋದಯವಾಗಿ ಹೋದರೂ ಹಾಗೆಯೇ ಹೊರಳಾಡುತ್ತಲೆ ಇದ್ದೆ. ಏಳುಗಂಟೆಯ ಶಬ್ದ ಕೇಳಿ ಹಾಸಿಗೆಯನ್ನು ಬಿಟ್ಟಿದ್ದೆ. ಬೆಳಗಿನ ಕಾರ್ಯಗಳನ್ನೆಲ್ಲ ಪೂರೈಸಿಕೊಂಡು ಮರಳಿ ಕಿರುಮನೆಯನ್ನೇ ಸೇರಿದೆ. ಅಂದು ಆರೈಕೆಗಾಗಿ ಕನಕಮ್ಮ ಬಂದಾಗ ಕೂಡ ನಾನು ಹೊರಬೀಳಲಿಲ್ಲ. ನನ್ನ ಹೆಂಡತಿ, ಕನಕಮ್ಮ ಆದೆಷ್ಟೋ ಹೊತ್ತಿನವರೆಗೆ ಗುಣುಗುಣು ಮಾತ ನಾಡುತ್ತಿದ್ದರೇನೊ! ನಾನು ನನ್ನ ಯೋಚನೆಯಿಂದ ನಡುನಡುವೆ ಕೊಂಚ ಬಿಡುವು ಪಡೆದಾಗ, ಆ ಗುಣಗಾಟದ ಶಬ್ದ ಕಿವಿಗೆ ಬೀಳುತ್ತಿದ್ದಿತು. ಏನೇನು ಮಾತನಾಡಿದರೋ ಕಾಣೆ. ಅದನ್ನು ಕಿವಿಗೊಟ್ಟು ಕೇಳುವಷ್ಟು ನನ್ನ ಮನಸ್ಸಿಗೆ ಸ್ಥೈರ್ಯವೆಲ್ಲಿದ್ದಿತು!

ಮನಸ್ಸಿಗೆ ಹತ್ತಿದ್ದ ಹುರುಕನ್ನು ತುರಿಸಿಕೊಳ್ಳುವುದರಲ್ಲಿಯೆ ಹಗಲೆಲ್ಲ ಕಳೆಯಿತು. ಎಲ್ಲಿ ಕುಳಿತರೂ ಸಮಾಧಾನವಿಲ್ಲ, ಎಲ್ಲಿ ನಿಂತರೂ ಸಮಾಧಾನ ವಿಲ್ಲ. ಮಗುವಿನ ಮುಗುಳುನಗೆಯಲ್ಲಿ ಕೂಡ ಸೊಗಸು ತೋರಲಿಲ್ಲ. "ನನ್ನ ಹೆಂಡತಿಯ ಮನದ ಸಂಶಯದ ಕೊಳೆಯನ್ನು ತೊಳೆಯುವ ಬಗೆ ಹೇಗೆ?" ಎಂಬುದೊಂದು ಚಿಂತೆ; "ಪಾಪ! ವ್ಯರ್ಥವಾಗಿ ಆ ಹೆಂಗುಸಿನ ಮನ ನೋಯಿಸಿದಂತಾಯಿತಲ್ಲ! ಸುಲಭವಾಗಿ ಸಿಕ್ಕದ ಆಕೆಯ ಸ್ನೇಹಕ್ಕೆ ಸುಮ್ಮನೆ ಎರವಾಗಬೇಕಾಯಿತಲ್ಲ!" ಎಂಬುದೊಂದು ಚಿಂತೆ. ಈ ಎರಡು ಚಿಂತೆಗಳ ಗಾಣಕ್ಕೆ ನನ್ನ ಮೈ-ಮನ-ಬಗೆಗಳು ಕಬ್ಬಾಗಿಬಿಟ್ಟಿದ್ದುವು.

"ಈಗ ಬೇನೆಯ ಕಸುವು ಕಡಿಮೆಯಾಗಿದೆ. ಒಂದೇ ಹೊತ್ತು ಉಪಚಾರಮಾಡಿದರೆ ಸಾಕು." ಎಂದು ಡಾಕ್ಟರು ಹೇಳಿದರು. ಆದುದರಿಂದ ಕನಕಮ್ಮ ಎರಡು ದಿನಗಳಿಂದ ಬೆಳಗಿನಲ್ಲಿ ಮಾತ್ರ ಬಂದುಹೋಗುತ್ತಿದ್ದಳು.

ಅಂದು ಸಂಜೆಯ ಆರುವರೆ ಗಂಟೆಯಾಗಿರಬಹುದು. ಮುಂಬಾಗಿಲಲ್ಲಿ ಕನಕಮ್ಮ ನನ್ನ ಹೆಸರನ್ನು ಹಿಡಿದು ಕೂಗಿದಂತೆ ದನಿಯೊಂದು ಕೇಳಿಸಿತು. ನಾನು ಎದ್ದು ಆತುರದಿಂದ ಹೊರಕ್ಕೆ ಬಂದು ನೋಡಿದೆ. ಬಾಗಿಲಲ್ಲಿ ಕನಕಮ್ಮ ನಿಂತಿದ್ದಳು. ನನ್ನನ್ನು ನೋಡಿ ಮಾತನಾಡಿದಳು. "ಮತ್ತೇನೂ

ಇಲ್ಲ. ನನ್ನ ಜೊತೆಗೆ ಬರುತ್ತಿದ್ದಳಲ್ಲ; ಆಕೆ ನಿಮಗೆ ತಲ್ಪಿಸುವುದಕ್ಕಾಗಿ ಈ ಕಾಗದ ಕೊಟ್ಟಿದ್ದಾಳೆ. ತೆಗೆದುಕೊಳ್ಳಿ. ನಾನೀಗ ನಿಲ್ಲುವಂತಿಲ್ಲ. ಅವಸರದ ಕೆಲಸವಿದೆ" ಇಷ್ಟು ಮಾತನಾಡಿ, ಕಟ್ಟೋಲೆ (ಕವರ್) ಯೊಂದನ್ನು ನನ್ನ ಕೈಗೆ ಕೊಟ್ಟು ಆಕೆ ಹೊರಟುಬಿಟ್ಟಳು. ಅದನ್ನು ತೆಗೆದುಕೊಂಡು ಹಾಗೆಯೇ ಮರಳಿ ಕಿರುಮನೆಗೆ ಬಂದೆ. ಬರುತ್ತಿರುವಾಗ "ಪಾಪ! ಮನದಲ್ಲಿ ನೊಂದುಕೊಂಡಿದ್ದ ಆಕೆ ಏನೆಂದು ಬರೆದಿದ್ದಾಳೋ! ನನ್ನ ಮೇಲೆಯೇ ಏನಾದರೂ ದೋಷವನ್ನು ಹೊರಸಿರಬಹುದಲ್ಲವೇ!" ಎಂದು ಮೊದಲಾದ ಯೋಚನೆಗಳು ಬಂದುಹೋದವು. ಎದೆಯಲ್ಲಿ ದಡದಡಿಸಲು ತೊಡಗಿದ್ದಿತು.

ಕಿರುಮನೆಗೆ ಬಂದು ಕುರ್ಚಿಯೊಂದರಲ್ಲಿ ಕುಳಿತೆ. ನಡುಗುತಿರುವ ಕೈಗಳಿಂದ ಕಟ್ಟೋಲೆಯನ್ನು ಬಿಚ್ಚಿದೆ. ಅದರಲ್ಲಿ ಉದ್ದೋ ಉದ್ದವಾದುದೊಂದು ಓಲೆ. ಕೈಬರೆಹ ಮುತ್ತಿನಂತಹದು. ಮನದಲ್ಲಿಯೆ ಓದಿಕೊಳ್ಳಲು ತೊಡಗಿದೆ.

ಕಾಗದವನ್ನು ಓದುತ್ತ ಓದುತ್ತ ಹೋದಹಾಗೆಲ್ಲ ನನ್ನ ಆತುರ ಬಳೆಯುತ್ತ ನಡೆಯಿತು. ನಾಡಿಗಳ ವ್ಯವಹಾರ ಒತ್ತರದಿಂದ ಸಾಗಿತು. ನಾನೇನು ಕನಸಿನಲ್ಲಿದ್ದೇನೋ ಎಚ್ಚರದಲ್ಲಿದ್ದೇನೋ ?– ನಿರ್ಣಯಿಸಲು ಅಶಕ್ಯವಾಯಿತು ನಾನಾಗ ಕಿರುಮನೆಯಲ್ಲಿ ಒಬ್ಬನೇ ಒಬ್ಬ. ಓದುತಿರುವಾಗ ಒಮ್ಮೆ ಬೆರಗಿನ ಭರದಲ್ಲಿ "ಆಕೆಯೇ! ಆ ಹೆಂಗುಸೇ!" ಎಂದು ಗಟ್ಟಿಯಾಗಿ ನುಡಿದುಬಿಟ್ಟೆ. ಬರಬರುತ್ತ ಕಣ್ಣಲ್ಲಿ ಕಂಬನಿಗಳು ಧಾರೆಗಟ್ಟಿದುವು. ಆಗಾಗ ಪಂಚೆಯ ಸೆರಗಿನಿಂದ ಕಣ್ಣನ್ನು ಒರಸಿಕೊಳ್ಳುತ್ತ ಕಾಗದವನ್ನು ಓದಿ ಪೂರಯಿಸಿದೆ. ಸಮಾಧಾನದ ನಿಟ್ಟುಸಿರೊಂದನ್ನು ಬಿಟ್ಟೆ. ತಲೆಯ ಮೇಲಿದ್ದ ಬೆಟ್ಟವೊಂದು ತಾನಾಗಿಯೆ ಕೆಳಕ್ಕುರುಳಿಬಿದ್ದಂತೆ ಎನಿಸಿತು ನನಗೆ. ಬಲಹೀನವಾಗಿದ್ದ ನರಗಳಲ್ಲಿ ಮತ್ತೆ ಕೊಂಚ ಹುರುಪು ಹರಿದಾಡಲು ತೊಡಗಿತು. ಇದು ಒಂದೆರಡು ನಿಮಿಷಗಳವರೆಗೆ ಮಾತ್ರ. ಬಳಿಕ ತಲೆಯಲ್ಲಿ ಬೇರೊಂದು ಬಗೆಯ ವಿಚಾರಗಳು ತಾಂಡವವಾಡುವುದಕ್ಕೆ ಪ್ರಾರಂಭಿಸಿದುವು.

ಆ ಓಲೆಯಲ್ಲಿ ಬರೆದಿದ್ದ ಸಂಗತಿಯನ್ನು ತಿಳಿದುಕೊಳ್ಳಬೇಕೆಂದು, ಓದುವವರೆಲ್ಲರೂ ಆತುರರಾಗಿರಬಹುದು. ಇದು ನೋಡಿ! ಹೀಗಿದ್ದಿತು

'ಅದರಲ್ಲಿ :—

" ಪ್ರಿಯ ಕೃಷ್ಣಮೂರ್ತಿರಾಯರೆ,

ನಿನ್ನೆ ನಡೆದುಹೋದ ವಿಷಮಸಂದರ್ಭಕ್ಕಾಗಿ ನೀವು ತುಂಬಾ ನೊಂದುಕೊಂಡಿದ್ದುದನ್ನು ನಾನು ಕಣ್ಮುಟ್ಟ ನೋಡಿದೆನು. ನನಗೆ ಅವಮಾನವಾಯಿತೆಂದು ನಾನು ಅಷ್ಟೊಂದು ವ್ಯಥೆಪಡುವುದಿಲ್ಲ. ನನ್ನ ಸಲುವಾಗಿ ನಿಮ್ಮ ಹೂವಿನಂತಹ ಹೃದಯಕ್ಕೆ ನೋವಾಯಿತಲ್ಲ– ಎಂದು ಎದೆಗುದಿ ನನಗೆ. ತಾಯಿ ಅಜ್ಞಾನದಿಂದ–ತಿಳಿವಳಿಕೆಯಿಲ್ಲದೆ–ಏನೇನೋ ಬಾಯಿಗೆ ಬಂದಂತೆ ಮಾತನಾಡಿದರು. ನೀವು ಹಿರಿಯಳೆಂಬ ಗೌರವದಿಂದ, ಒಂದಾದ ತುಟಿ ಎರಡುಮಾಡದೆ, ಸುಮ್ಮನೆ ಮನದಲ್ಲಿ ಕುದಿಯುತ್ತ ಕುಳಿತಿರಿ ನಿಮ್ಮ ಆ ಸೌಜನ್ಯವನ್ನು ಕಂಡು ನಾನು ಆನಂದಪಟ್ಟೆ. ಅದಿರಲಿ! ಈಗ ಈ ಓಲೆಯ ಮುಖಾಂತರವಾಗಿ ನಿಮಗೊಂದು ವಿಶೇಷ ವಿಷಯ ತಿಳುಹಿಸಬೇಕಾಗಿದೆ. ಅದಕ್ಕೆಂತಲೇ ಆತುರಪಟ್ಟು ಇದನ್ನು ಬರೆದುಕಳುಹಿಸಿರುತ್ತೇನೆ.

" ನಾನು ಈ ಊರಿಗೆ ಬಂದ ಉದ್ದೇಶವೆಂದರೆ ನಿಮ್ಮನ್ನು—ನಿಮ್ಮ ಮನೆಯ ಜನರನ್ನು—ನೋಡುವುದಕ್ಕಾಗಿ. ಇಲ್ಲಿ ಬಂದು ನನ್ನ ಪರಿಚಯದವಳಾದ ಕನಕಮ್ಮನ ಮನೆಯಲ್ಲಿಯೆ ಇದ್ದೆ. ಆರೇಳು ದಿವಸಗಳಾದುವು. ಬಳಿಕ ಕನಕಮ್ಮ, ನಿಮ್ಮ ಮನೆಗೆ ರೋಗಿಯ ಆರಯ್ಕೆಗೆಂದು ಬರಲು ತೊಡಗಿದಳು. ಒಂದು ದಿನ, ನಾನು–ಆಕೆ ಮಾತನಾಡುತ್ತ ಕುಳಿತಿದ್ದಾಗ ನಿಮ್ಮ ಮನೆಯ ಮಾತು ಹೊರಟಿತು. ' ಕರಣಿಕ ' ಎಂದಿದ್ದ ನಿಮ್ಮ ಮನೆತನದ ಹೆಸರು ನನಗೆ ತೀರ ಗುರುತಿನದು. ನಿಮ್ಮ ಹೆಂಡತಿಯ ಬೇನೆಯ ವಿಷಯಕ್ಕೆ ಮಾತನಾಡಿದೆವು. ನಿಮ್ಮ ತಂದೆಯವರ ಪರಿಚಯ ಕನಕಮ್ಮನಿಗಿದ್ದಿತಂತೆ. ' ಅವರು ಬಲು ಒಳ್ಳೆಯವರು ' ಎಂದು ಕನಕಮ್ಮ ಹೇಳಿದಳು. ನಾನು ಆ ಮೊದಲೇ ನಿಮ್ಮ ತಂದೆಯವರ ಹೆಸರನ್ನೂ ಅವರ ಸದ್ಗುಣಗಳನ್ನೂ ಕೇಳಿ ಅರಿತಿದ್ದೆ. 'ಕರಣಿಕರ ಮನೆಗೆ ನಿನ್ನೊಡನೆ ನಾನೂ ಬರಲೇ?' ಎಂದು ಕನಕಮ್ಮನನ್ನು ಕೇಳಿದೆ. ' ಅದಕ್ಕೇನು? ಬಂದುಬಿಡು ' ಎಂದು ಆಕೆ ಹೇಳಿದಳು. ಮರುದಿನ ಬೆಳಗಿನಲ್ಲಿಯೆ ನಿಮ್ಮ ಮನೆಗೆ ಕನಕಮ್ಮನೊಡನೆ ಬಂದೆ. ನಿಮ್ಮನ್ನು ಕಣ್ಣು ಹಿಡಿಸಲಾರದಷ್ಟು ನೋಡಿ, ಹೃದಯ ಹಿಡಿಸಲಾರದಷ್ಟು ಹಿಗ್ಗನ್ನು ಅನುಭವಿಸಿದೆ.. ಹಲವು ಕಾರಣಗಳಿಂದ ಇದುವರೆಗೆ ನನ್ನ ಪೂರ್ವೋತ್ತರಗಳನ್ನು ಹೇಳದೆ ಮುಚ್ಚಿಟ್ಟದ್ದೆ. ಈಗ ತಕ್ಕ ಸಂದರ್ಭ ಬಂದು

ದರಿಂದ, ಅದನ್ನು ಸ್ಪಷ್ಟವಾಗಿ ತಿಳುಹಿಸಿ ಬಿಡಬೇಕೆಂದಿದ್ದೇನೆ.

"ನಾನು ನಿಮಗೆ ಹೊರಗಿನವಳಲ್ಲ. ನಿಮ್ಮ ಮನೆತನಕ್ಕೇ ಸೇರಿದವಳು. ಸಿಂಹಲದ್ವೀಪದಲ್ಲಿದ್ದ ನಿಮ್ಮ ಚಿಕ್ಕಪ್ಪನ ಕೈಯನ್ನು ಹಿಡಿದವಳು. ನಿಮಗೆ ಚಿಕ್ಕಮ್ಮ." (ಇದೇ ಮಾತನ್ನು ಓದಿದಾಗ 'ಆಕೆಯೇ! ಆ ಹೆಂಗುಸೇ!' ಎಂದು ಉದ್ಗಾರ ತೆಗೆದುದು.)

"ನಮ್ಮ ತಂದೆ ಸಿರಿವಂತರು. ಕೋಲಂಬೋದಲ್ಲಿ ದೊಡ್ಡ ವರ್ತಕರಾಗಿರುವರು. ನಿಮ್ಮ ಚಿಕ್ಕಪ್ಪ ಅಲ್ಲಿಗೆ ಬಂದ ಮೊದಲು ಮೂರು ನಾಲ್ಕು ವರ್ಷ ನಮ್ಮ ಮನೆಯಲ್ಲಿಯೇ ಇದ್ದರು. ಅವರ ರೂಪ-ಗುಣ-ಶೀಲಗಳಿಗೆ ನಮ್ಮ ತಂದೆಯವರು ಮನಸೋತರು. ಮನಸೋತವರು ತಂದೆ ಒಬ್ಬರೇ ಅಲ್ಲ. ನನ್ನನ್ನು ಅವರಿಗೆ ವಿವಾಹವಿಧಿಯಿಂದ ಒಪ್ಪಿಸಿದರು. ಅಂದೆಯೆ ನಾನು ನಿಮಗೆ ಚಿಕ್ಕಮ್ಮನಾದೆ. ಇದುವರೆಗೆ ಗೊತ್ತಿಲ್ಲದ ಚಿಕ್ಕಮ್ಮನಾಗಿ ಇದ್ದೆ; ಇನ್ನು ಮೇಲೆ ಗೊತ್ತಿದ್ದ ಚಿಕ್ಕಮ್ಮನಾಗಿರಬೇಕೆಂಬ ಉದ್ದೇಶದಿಂದ ನಾನಿಲ್ಲಿಗೆ ಬಂದೆ. ನಿಮ್ಮ ಚಿಕ್ಕಪ್ಪನ ಮರಣಸಮಯದ ಬಯಕೆಯೂ ನಾನು ಇಲ್ಲಿಗೆ ಹೊರಟು ಬರುವಂತೆ ಪ್ರೇರಣೆಮಾಡಿತು. ಆದುದರಿಂದಲೆ ನಮ್ಮ ತಂದೆ ಅದೆಷ್ಟು ಬಲುಮೆ ಮಾಡಿದರೂ ಅವರ ಮಾತನ್ನು ಅಲ್ಲಗಳೆದು, ಅಲ್ಲಿ ನಿಲ್ಲದೆ ನಿಮ್ಮನ್ನು ಹುಡುಕಿಕೊಂಡು ಈ ಊರಿಗೆ ಬಂದೆ."

"ನಾನು ನಿಮ್ಮ ಮನೆಗೆ ಬಂದಾಗ, ಮೊದಲು ಒಂದೆರಡು ದಿನ ಇನ್ನಾವುದನ್ನೂ ಮಾಡದೆ ಬೆರಗುಗಣ್ಣುಗಳಿಂದ ನಿಮ್ಮ ಕಡೆಗೆ ನೋಡುವುದನ್ನೇ ಮಾಡಿದೆ. ಅದಕ್ಕೆ ಬೇರೆ ಯಾವ ಕಾರಣವೂ ಇಲ್ಲ. ನಿಮ್ಮ ಚಿಕ್ಕಪ್ಪನ ಕಣ್ಣು—ಮೂಗು—ತುಟಿ—ಹಲ್ಲುಗಳನ್ನೇ ಅಂದು ನಿಮ್ಮ ಮುಖದಲ್ಲಿ ನೋಡಿದೆನು. ಅವರ ನೋಟದ ಬಗೆ, ಮಾತಿನ ರೀತಿಗಳನ್ನೇ ನಿಮ್ಮಲ್ಲಿ ಕಂಡೆನು. ಮತ್ತೊಮ್ಮೆ, ನನ್ನ ಕಳೆದು ಹೋದ ಒಳ್ಳೆಯ ಕಾಲದ ನೆನಪನ್ನು ಮನದೆದುರು ತಂದುಕೊಂಡೆನು. ನಿಮ್ಮನ್ನು ನೋಡುತ್ತಿದ್ದಾಗ ನನ್ನ ತಲೆಯಲ್ಲಿ ಒಂದು ಹುಚ್ಚು ವಿಚಾರ ಬಂದಿತು. ಅದನ್ನು ನೀವು ಕೇಳಿದರೆ ನಕ್ಕು ಬಿಡಬಹುದು. "ನನ್ನ ಹೊಟ್ಟೆಯಿಂದಲೂ ಮಗುವೊಂದು ಹುಟ್ಟಿದ್ದರೆ ಈತನ ಹಾಗೆಯೇ ಇರುತ್ತಿದ್ದಿತಲ್ಲವೇ!" ಎಂದು. ಅಹುದೋ ಅಲ್ಲವೋ ನೋಡಿ ಹುಚ್ಚು ವಿಚಾರ! (ಈ ಮಾತನ್ನು ಓದಿ ನನಗೆ ನಗೆ ಬರಲಿಲ್ಲ; ಇಷ್ಟೇ ಅಲ್ಲ ಕರುಳನ್ನು ಹಿಡಿದು ಒತ್ತಿಹಿಂಡಿದಂತಾಯಿತು. ಕಣ್ಣಲ್ಲಿ ಕಂಬನಿ ತುಳುಕಿತು.)"

"ನಾನು ಅಂದು ನಿಮ್ಮನ್ನು ಎವೆಯಿಕ್ಕದೆ ನೋಡಿದುದನ್ನು ಕಂಡ ನಿಮ್ಮ ಹೆಂಡತಿ, ಏನೇನೋ ವಿಪರೀತ ಭಾವನೆಗಳನ್ನು ಮಾಡಿಕೊಂಡಿರುವ ಳಂತೆ. ಕನಕಮ್ಮ ಈ ಮಾತನ್ನೂ ಇದರೊಡನೆಯೆ ಇನ್ನೂ ಎಷ್ಟೋ ಮಾತುಗಳನ್ನೂ ಇಂದು ಬೆಳಗಿನಲ್ಲಿಯೆ ನನಗೆ ಹೇಳಿದಳು. ಹೆಂಡಿರು ತಮ್ಮ ಗಂಡಂದಿರ ವಿಷಯಕ್ಕೆ ಏನೇನೋ ಸಂಶಯಪಡುತ್ತಿರುವುದು ಸ್ವಾಭಾವಿಕ. ಆಕೆ ದೋಷವಿತ್ತುದಕ್ಕಾಗಿ ನನಗೆ ಕೊಂಚವೂ ವ್ಯಥೆಯಿಲ್ಲ."

"ನಿಮ್ಮ ಹೆಂಡತಿಯ ಮನದಲ್ಲಿ, ತಾಯಿಯ ಮನದಲ್ಲಿ, ನನ್ನ ವಿಷ ಯಕವಾದ ವಿಪರೀತಭಾವನೆಯು ಬೇರೂರಿ ಬಿಟ್ಟಂತೆ ಕಾಣುತ್ತಿದೆ. ಈಗ ನಾನು ನಿಮಗೆ 'ಚಿಕ್ಕಮ್ಮ' ಎಂಬುದನ್ನು ಬಾಯಿಬಿಟ್ಟು ಹೇಳಿದರೂ ಅವರಿಗೆ ನಂಬಿಕೆಯಾಗದೆಂದು ನನ್ನ ಭಾವನೆ. ಆಗಲೂ ಅವರು ಏನಾದರೂ ವಿಕಲ್ಪವನ್ನೇ ಭಾವಿಸಬಹುದು. ನಾನು ಯಾವುದೋ ಒಂದು ದೊಡ್ಡ ಉದ್ದೇಶವನ್ನಿಟ್ಟುಕೊಂಡು ಈ ಊರಿಗೆ ಬಂದೆ. ಇನ್ನು ಮೇಲೆ ಇಲ್ಲಿರುವು ದರಲ್ಲಿ ಪ್ರಯೋಜನವೇನೂ ಇಲ್ಲವೆಂದು ತೋರುತ್ತಿದೆ. ನಮ್ಮ ತಂದೆಯ ಮನೆಗೇ ಮರಳಿ ಹೋಗಬೇಕೆಂದಿರುತ್ತೇನೆ. ಎಲ್ಲಿದ್ದರೇನು! ಇದ್ದಲ್ಲಿಯೇ ನಿಮ್ಮ ಕಲ್ಯಾಣವನ್ನು ಚಿಂತಿಸುತ್ತ ಕಾಲಕಳೆದರೆ ಆಗದೇ?"

"ನಾನು ನಾಳೆಯೇ ಹಗಲು ಎರಡು ಗಂಟೆಯ ಬಂಡಿಯಿಂದ ಈ ಊರನ್ನು ಬಿಟ್ಟು ಹೊರಡಬೇಕೆಂದಿದ್ದೇನೆ. ಅಷ್ಟರಲ್ಲಿಯೇ ಇನ್ನೊಂದು ಸಲ ನಿಮ್ಮನ್ನು ಅವಶ್ಯವಾಗಿ ಕಾಣಬೇಕಾಗಿದೆ. ನಿಮ್ಮ ಮನೆಗೆ ನಾನಾಗಿಯೇ ಬರಬೇಕೆಂದರೆ ಅದೇತಕ್ಕೋ ಮನಸ್ಸು ಹಿಂಜರಿಯುತ್ತಿದೆ. ಆದುದರಿಂದ ನೀವೇ ನಾಳೆಯ ಬೆಳಗಿನಲ್ಲಿ, ಕನಕಮ್ಮನ ಮನೆಯ ಕಡೆಗೆ ಬಂದುಬಿಟ್ಟರೆ ಎಲ್ಲವೂ ಸರಿಹೋಗುವುದು."

"ನಿಮ್ಮ ಚಿಕ್ಕಪ್ಪನ ಸಂಪಾದನೆಯ ಬಹುಭಾಗವೆಲ್ಲವೂ—ಅವರಿದ್ದಾ ಗಲೆ— ಪರೋಪಕಾರಕ್ಕಾಗಿಯೇ ವೆಚ್ಚವಾಗಿದೆ. ಇನ್ನು ಇಪ್ಪತ್ತು ಸಾವಿರ ರೂಪಾಯಿಗಳ ನಗದು ಹಣ ಮಾತ್ರ ಉಳಿದಿದೆ. ಅದೂ ಬ್ಯಾಂಕಿ ನಲ್ಲಿ ಇಡುಗಂಟಾಗಿದೆ. ಅದನ್ನು ನಿಮಗೆ ಸಲ್ಲಿಸಬೇಕೆಂದು, ನಿಮ್ಮ ಚಿಕ್ಕಪ್ಪ ನವರ ಬಾಳಿನ ಕೊನೆಯ ಕಾಲದ ಬಯಕೆ. ಆ ಬಯಕೆಯನ್ನು ನೆರವೇರಿ ಸುವುದು ನನ್ನದು—ನಿಮ್ಮದು ಇಬ್ಬರದೂ ಕರ್ತವ್ಯ. ನಾಳೆಗೆ ನೀವು ಇಲ್ಲಿಗೆ ಬಂದಾಗ, ಆ ಹಣ ನಿಮ್ಮ ಕೈಗೆ ಸಿಕ್ಕುವಂತೆ ನಾನೊಂದು ಅಧಿಕಾರ

ಪತ್ರ ಬರೆದುಕೊಡುವೆನು. ಚಿಕ್ಕಪ್ಪನ ಆದೇಶವನ್ನು ನೀವು ಅಲ್ಲಗಳೆಯ ಲಾರಿರೆಂದು ನನ್ನ ನಂಬುಗೆ.

"ತಾಯಿಯವರಿಗೆ ನನ್ನ ಅನೇಕಾನೇಕ ನಮಸ್ಕಾರಗಳು. ನಿಮ್ಮ ಹೆಂಡತಿಗೆ ಒಲುಮೆಯ ಹಲವು ಹರಕೆಗಳು. ಚಿ. ನಂಗಣ್ಣನಿಗೆ ನೂರು ವರ್ಷ ಬಾಳೆಂಬ ಹರಕೆಯೊಂದಿಗೆ ಮೆಚ್ಚಿನ ಮುತ್ತೊಂದು. ನಾಳೆಗೆ ನೀವು ಖಂಡಿತವಾಗಿ ಬಂದು ಬಿಡಿ!"

ನಿಮ್ಮ "ಚಿಕ್ಕಮ್ಮ"

ಓಲೆಯ ಕೊನೆಗೆ "ಕಮಲಮ್ಮ" ಎಂದು ಹೆಸರದೆ "ವೈಜಯಂತೀ ಬಾಯಿ" ಎಂದಿದ್ದಿತು. ಈ ಹೆಸರು ನಮ್ಮ ಚಿಕ್ಕಪ್ಪನವರಿಟ್ಟ ಹೆಸರೇನೋ!

ಕಾಗದವನ್ನೋದುವುದಾದ ಕೂಡಲೆ ಚಟ್ಟನೆ ಎದ್ದೆ. ಕೈಯಲ್ಲಿ ಓಲೆ ಯನ್ನು ಹಿಡಿದುಕೊಂಡು, ಆತುರದ ಹೆಜ್ಜೆ ಹಾಕುತ್ತ ನಡುಮನೆಗೆ ಹೋದೆ. ನನ್ನ ತಾಯಿ, ಹೆಂಡತಿ ಕೂಡಿ ಅಲ್ಲಿಯೇ ಕುಳಿತಿದ್ದರು. ಕೈಯಲ್ಲಿದ್ದ ಕಾಗದ ವನ್ನು ನೋಡಿ, ತಾಯಿ ಕೊಂಚ ಅವಸರದ ದನಿಯಲ್ಲಿ ಕೇಳಿದಳು.

"ಯಾರ ಕಾಗದವೋ ಕಿಟ್ಟಾ! ಇಂದೇ ಬಂದಿದೆಯೇನು?"

"ಅಹುದಮ್ಮಾ, ಇಂದೆಯೇ ಬಂದಿದೆ."

"ಯಾರು ಬರೆದಿದ್ದಾರೆ?"

"ಕನಕಮ್ಮನ ಜೊತೆಗಾತಿ ಇದ್ದಾಳಲ್ಲ! ಆಕೆ ಬರೆದಿದ್ದಾಳೆ."

ಇಬ್ಬರ ಮುಖದ ಕಳೆಯಲ್ಲಿಯೂ ಮಾರ್ಪಾಡಾಯಿತು. ತಾಯಿ ಬಿರುಸಾದ ಮಾತಿನಿಂದ ಕೇಳಿದಳು.

"ಅದೇನು? ಆಕೆ ಏತಕ್ಕೆ ಬರೆದಿದ್ದಾಳೆ? ಇನ್ನೂ ಏನೇನು ಮಾಡ ಬೇಕೆಂದಿದ್ದಾಳೆ?" ಆಗಿನ ತಾಯಿಯ ಚುಚ್ಚುನುಡಿ ನನಗೆ ಅಷ್ಟೊಂದು ಅಸಹ್ಯವೆನಿಸಲಿಲ್ಲ.

"ಆಕೆ ನಮ್ಮವಳೇ ಅಂತೆ ಅಮ್ಮಾ! ನಮ್ಮ ಚಿಕ್ಕಮ್ಮನಂತೆ."

"ಅಂದರೆ..?" ತಾಯಿ ಬೆಟ್ಟಿ ಬಿದ್ದವಳಾಗಿ ಕೇಳಿದಳು.

"ನಮ್ಮ ರಾಮುಚಿಕ್ಕಪ್ಪನ ಹೆಂಡತಿಯಂತೆ ಆಕೆ"

"ಅಂ! ಏನು? ಆಕೆ ನಮ್ಮ ರಾಮುರಾಯರ ಹೆಂಡತಿಯೇ?"

"ಅಹುದಮ್ಮಾ! ಈ ಕಾಗದದಲ್ಲಿ ತನ್ನ ಕತೆಯನ್ನೆಲ್ಲ ಬರೆದಿದ್ದಾಳೆ. ಪಾಪ!"

"ಏನೇನು ಬರೆದಿದ್ದಾಳೆ? ಓದು ನೋಡೋಣ!" ತಾಯಿ ಕುತೂಹಲಭಾವದಿಂದ ಮಾತನಾಡಿದಳು.

ನಾನು ಕಾಗದ ಓದಿ ಹೇಳಲು ತೊಡಗಿದೆ. ತಿಳಿಯದ ಭಾಗವನ್ನು ಒಡೆದೊಡೆದು ಹೇಳುತ್ತಿದ್ದೆ. ತಾಯಿ, ಹೆಂಡತಿ ಇಬ್ಬರೂ ಬೆರಗಾದವರಾಗಿ ಬಾಯ್ತೆರೆದು ಕೇಳುತ್ತಿದ್ದರು. ಚಿಕ್ಕಪ್ಪ ಸತ್ತ ಮಾತು ಓದಿದೊಡನೆಯೆ ನಮ್ಮ ತಾಯಿ "ಅಯ್ಯೋ ರಾಮರಾಯರು ಎಂತಹ ಮನುಷ್ಯರು!" ಎಂದು ಅತ್ತುಬಿಟ್ಟಳು. ಮತ್ತೆ ನಸು ಸಮಾಧಾನ ತಂದುಕೊಂಡು, ಮುಂದಿನ ಸಂಗತಿ ಕೇಳಲು ತೊಡಗಿದಳು. ಕಣ್ಣೀರು ಧಾರೆಗಟ್ಟಿದ್ದುವು. ಆಗಾಗ ಉಕ್ಕಿ ಬರುತ್ತಿದ್ದ ದುಃಖವನ್ನು ನುಂಗಿಕೊಳ್ಳುತ್ತಿರುವಂತೆ ತೋರುತ್ತಿದ್ದಿತು.

ಕಾಗದವನ್ನು ಓದುವುದಾಯಿತು. ತಾಯಿ ದುಃಖದ ನಿಟ್ಟುಸಿರೊಂದನ್ನು ಬಿಟ್ಟಳು. ಇಬ್ಬರ ಮುಖದಲ್ಲಿಯೂ ಪಶ್ಚಾತ್ತಾಪವು ಚೆನ್ನಾಗಿ ತನ್ನ ಮುದ್ರೆಯನ್ನೊತ್ತಿದ್ದಿತು. ನನ್ನ ಹೆಂಡತಿಗೆ ಪಶ್ಚಾತ್ತಾಪದೊಂದಿಗೆ ಒಂದು ಬಗೆಯ ಸಮಾಧಾನವಾದಂತೆ ಕಂಡಿತು.

ತಾಯಿ ಮರುಗುತಿರುವ ಮನದಿಂದ ನುಡಿದಳು. "ಆಲ್ಲೋ! ನಿನ್ನೆ ನಾನು ಆಕೆಗೆ ಕೆಟ್ಟಕೆಟ್ಟ ಮಾತುಗಳನ್ನಾಡಿ ಬಿಟ್ಟೆ."

ಹೆಂಡತಿಯು ಯಾವುದನ್ನೂ ನುಡಿಯದೆ, ದೈನ್ಯಭಾವ ಬೆರೆತ ಅರಳಿದ ಕಣ್ಣುಗಳಿಂದ ನನ್ನನ್ನು ನೋಡಿದಳು "ನಾನು ತಿಳಿಯದೆ ನಿಮ್ಮಲ್ಲಿ ಸಂಶಯಪಟ್ಟುಕೊಂಡೆ. ನನ್ನ ಮೂರ್ಖತನಕ್ಕಾಗಿ ಕ್ಷಮಿಸಬೇಕು." ಎಂಬ ಮಾತನ್ನು ಸೂಚಿಸುತ್ತಿದ್ದಿತಾನೋಟ. ನಾನು ಮತ್ತೊಮ್ಮೆ ಮನದಲ್ಲಿಯೇ ಕಾಗದ ಓದಲು ತೊಡಗಿದೆ.

"ಕಿಟ್ಟಾ, ನಾಳೆ ಬೆಳಗಿನಲ್ಲಿ ನೀನು ಬೇಗನೆ ಹೋಗು. ಆಕೆಯನ್ನು ಮನೆಗೆ ಕರೆದುಕೊಂಡು ಬಂದು ಬಿಡು. ನಮ್ಮಲ್ಲಿಯೇ ಇದ್ದುಬಿಡಲಿ, ಏತಕ್ಕಾಗಿ ಹೋಗಬೇಕು ಊರಿಗೆ?" ತಾಯಿ ಕರಗಿದೆದೆಯಿಂದ ಮಾತನಾಡಿದಳು.

ನಾನು ಬೇಕೆಂತಲೇ ಹೇಳಿದೆ. "ಇಲ್ಲಿ ಏತಕ್ಕಮ್ಮಾ? ಹೊರಟು ಹೋಗಿ ಬಿಡಲಿ ಪಾಪ—ತಂದೆಯ ಮನೆಗೆ. ನೀನು ಪುರಾಣಕಾಲದವಳು; ಆಕೆ ಕೊಂಚ ಈಗಿನ ಕಾಲದವಳು. ನಿನಗೆ ಆಕೆಗೆ ಹೊಂದಿಕೆಯಾಗುವುದೇ?"

ತಾಯಿ ಮತ್ತೆ ಕನಿಕರದ ದನಿಯಲ್ಲಿಯೆ ಮಾತಾಡಿದಳು. "ಅಯ್ಯೋ!

ಇದೇನು ಮಾತನಾಡುತ್ತೀಯೋ ಕಿಟ್ಟಾ? ಹೊಂದಿಕೆಯಾಗದೆ ಏನು ಮಾಡು ತ್ತದೆ? ನನ್ನ ತಂಗಿಯೇ ಒಬ್ಬಳು ಹಾಗೆ ಇದ್ದಾಳೆಂದು ತಿಳಿ. ಆಕೆಯನ್ನು ನಾನು ಹೊರಕ್ಕೆ ಅಟ್ಟಬಿಡುತ್ತಿದ್ದೆನೆ? ಇಲ್ಲದ ತೊಡಕನ್ನು ತಂದು ಒಡ್ಡ ಬೇಡ. ನಾಳೆಗೆ ಹೋಗಿ ಆಕೆಯನ್ನು ಮನೆಗೆ ಕರೆದುಕೊಂಡೇ ಬಂದು ಬಿಡು ನೋಡು."

ನಿನ್ನ ಅಭಿಪ್ರಾಯವೇನೆಂದು ಅರ್ಥವಾಗುವ ನೋಟದಿಂದ ಹೆಂಡ ತಿಯ ಕಡೆಗೆ ನೋಡಿದೆ. ತಾಯಿಯಾಡಿದ ಮಾತನ್ನು ಎತ್ತಿಹಿಡಿಯುವ ಭಾವವೇ ಆಕೆಯ ಮುಖದ ಮೇಲೆ ಮೂಡಿದ್ದಿತು.

ನಾನು ಮನಸ್ಸಿನಲ್ಲಿಯೇ ಎಂದುಕೊಂಡೆ. "ಸ್ವರ್ಗಕ್ಕೆ ಕಿಚ್ಚು ಹಚ್ಚು." ಎಂದು ಹೇಳುವ ದಿನಗಳು ನನಗೂ ಸಮಾಪಿಸಿದುವೇನೋ !

ಜನವರಿ ೧೯೩೧

---

# " ನೀನು ಪುಟ್ಟನ ತಾಯಿ ! "

## ೧

ಇಂದಕ್ಕನು ಅಕ್ಕನ ಮನೆಯಲ್ಲಿಯೇ ಬೆಳೆದು ದೊಡ್ಡವಳಾದಳು. ಆಕೆ ಒಳ್ಳೆಯ ಗಂಡನ ಕೈಹಿಡಿದು ಸುಖಸಂಸಾರಿಣಿಯಾದುದರ ಶ್ರೇಯಸ್ಸೆ ಲ್ಲವೂ ಅವಳ ಅಕ್ಕನಿಗೆ ಸಲ್ಲಬೇಕಾದುದು. ಅಕ್ಕ ಒಬ್ಬಾಕೆ ಇಲ್ಲದಿದ್ದರೆ ಆ ಪರದೇಶಿ ಇಂದಕ್ಕನಿಗೆ ಬೇರೆ ಯಾರು ಗತಿಯಿದ್ದರು? ಅಕ್ಕನ ಗಂಡ ಕೂಡ ಇಂದಕ್ಕನನ್ನು ಹೊಟ್ಟೆಯ ಮಗಳಂತೆ ಭಾವಿಸಿದ್ದರು.

ತಂಗಿಯ ಎಲ್ಲ ಮಂಗಲಕಾರ್ಯಗಳನ್ನೂ ನೋಡಿ ಆಯಿತು. ಆದರೆ ಅವಳು ಕೂಸಿನ ತಾಯಿಯಾಗಿ ಮುಂದೆ ಬಂದು ನಿಂತಾಗ, ತಾನು ಆ ಮುದ್ದುಮಗುವಿಗೆ ಮುತ್ತಿಡುವ ದಿನವನ್ನೂ ಬೇಗನೆ ಕಾಣಬೇಕೆಂದು, ಆ ಅಕ್ಕನ ಮನದ ಹಂಬಲ. ಇಂದಕ್ಕನು ಸಂಸಾರಗಿತ್ತಿಯಾಗಿ ಐದು ವರ್ಷ

ಗಳಾದರೂ ಅಕ್ಕನ ಆಶೆ ನೆರವೇರಿರಲಿಲ್ಲ; ಕೊನೆಗೂ ನೆರವೇರಲಿಲ್ಲ. ಅಕ್ಕನು ತನ್ನ ಮನದ ಹಂಬಲದೊಡನೆಯೆ ವಿಷಮಜ್ವರದ ಬಾಯಿಗೆ ಬಲಿಯಾಗಿಬಿಟ್ಟಳು. ನಾಲ್ಕು ವರ್ಷದ-ಅವಳ ಎಳಮಗು-ಕುಮಾರನು ತಾಯಿ-ಲ್ಲದ ತಬ್ಬಲಿಯಾದನು.

ಅಕ್ಕನ ಅಗಲಿಕೆಯ ದುಃಖವು, ಇಂದಕ್ಕನ ಹೃದಯವನ್ನು ಕೆಲವು ದಿನಗಳ ವರೆಗೆ ಕಲಕುಮಲಕು ಮಾಡಿತು. ದಿನಗಳು ಕಳೆದುಹೋದ ಹಾಗೆಲ್ಲ, ಅವಳ ಸಂಸಾರದ ಸುಖಸಂಕಥಾವಿನೋದದ ತರಂಗಗಳಲ್ಲಿ ಆ ದುಃಖದ ತೆರೆಗಳು ಮರೆಗೊಂಡುಬಿಟ್ಟುವು ಚತುರನಾದ ವೇಣುವಾದನಕಾರನ ಸಂಗೀತದಲ್ಲಿ, ಎಲ್ಲಿಯೋ ಒಂದೊಂದು ಸಲ, ಅಪ್ಪಿತಪ್ಪಿ ಅಪಶ್ರುತಿಗಳು ಉಂಟಾಗುವಂತೆ, ಇಂದಕ್ಕನ ಜೀವನದ ವೇಣುನಿನಾದದಲ್ಲಿ ಯಾವಾಗಲಾದರೊಮ್ಮೆ ಅಕ್ಕನ ಅಗಲಿಕೆಯ ದುಃಖದ ಉಸಿರು ಹೊರಲುತ್ತಿದ್ದಿತು.

ಭಾವನ ಒಪ್ಪಿಗೆಯನ್ನು ಪಡೆದು, ತಾಯಿಯನ್ನು ಕಳೆದುಕೊಂಡ ಕುಮಾರನನ್ನು ಇಂದಕ್ಕ ತನ್ನ ಮನೆಗೆ ಕರೆದುಕೊಂಡು ಹೋದಳು. ಪ್ರೀತಿಯಿಂದ ಅವನನ್ನು ಸಾಕಲು ತೊಡಗಿದಳು. ಕುಮಾರನೊಡನೆ ಮಮತೆಯಾಟಗಳನ್ನಾಡುವುದರಲ್ಲಿ, ಇಂದಕ್ಕನು ತನಗೆ ಮಕ್ಕಳಿಲ್ಲವೆಂಬ ವ್ಯಸನವನ್ನು ಬಹಳ ವೇಳೆ ಮನದಲ್ಲಿ ನಿಲ್ಲಗೊಡದಾದಳು.

ಇಂದಕ್ಕನಿಗೆ ಕುಮಾರನು ಅತ್ತರೂ ಚೆಂದ, ನಕ್ಕರೂ ಚೆಂದ. ಆತನ ಹುಡುಗಾಟದಲ್ಲಿಯೂ ಪ್ರೀತಿ, ಕಿಡಿಗೇಡಿತನದಲ್ಲಿಯೂ ಪ್ರೀತಿ. ಬಗೆಬಗೆಯಾದ ಉಡಿಗೆತೊಡಿಗೆಗಳಿಂದ, ಇಂದಕ್ಕ ಕುಮಾರನನ್ನು ಸಿಂಗರಿಸುವಳು. ಕಣ್ಣು ತುಂಬ ಆತನ ಮುದ್ದುಮೊಗವನ್ನು ನೋಡಿ, ಮನವಾರೆ ಮುತ್ತಿಡುವಳು. ಆಕೆಯ ಗಂಡ—ಅನಂತರಾಯರಿಗೆ ಆ ಹುಡುಗನಲ್ಲಿ ಅಷ್ಟೊಂದು ಮಮತೆಯಿದ್ದಿತೋ ಇಲ್ಲವೋ ಹೇಳಲಿಕ್ಕೆ ಬಾರದು; ಆದರೆ ಕುಮಾರನ ವಿಷಯದಲ್ಲಿರುವ ಇಂದಕ್ಕನ ಮಮತೆಗೆ ಅವರು ಪ್ರತಿಕೂಲಮತವನ್ನು ಪ್ರಕಟಿಸಿದುದು ಎಂದೂ ಇಲ್ಲ ಕುಮಾರನು ತಾಯಿತನದ ಕೊರತೆಯನ್ನೇನೂ ಕಾಣದೆ ತನ್ನ ಚಿಕ್ಕಮ್ಮನ ಬಳಿಯಲ್ಲಿದ್ದನು. ಪರಲೋಕದಲ್ಲಿದ್ದ ಆತನ ತಾಯಿ, 'ಇಂದಕ್ಕನನ್ನು ಚಿಕ್ಕತನದಿಂದಲೂ ಹೊಟ್ಟೆಯ ಮಗಳಂತೆ ಸಾಕಿ ಸಲಹಿದ ಪುಣ್ಯ ಹುಸಿಹೋಗಲಿಲ್ಲ.' ಎಂದು ಆಗಾಗ ಸಮಾಧಾನಪಟ್ಟುಕೊಳ್ಳುತ್ತಿರಬಹುದು. ಸಮಾಧಾನದ ಭರದಲ್ಲಿಯೇ 'ಅಪ್ಪ ಪುತ್ರ–

ಸೌಭಾಗ್ಯವತೀಭವ !’ ಎಂದು ತಂಗಿಯನ್ನು ನೂರಾರು ಸಲ ಹರಸಿರ ಬಹುದು.

ಕುಮಾರನದು ಒಳ್ಳೆಯ ಕಾಲಗುಣವೇನೋ ! ಅವನು ಮನೆಗೆ ಬಂದು ಎಂಟುಹತ್ತು ತಿಂಗಳು ಆಗುವುದರಲ್ಲಿಯೆ, ಇಂದಕ್ಕ ಎರಡು ಮೂರು ತಿಂಗಳ ಬಸಿರೆಯೆಂಬುದು ಗೊತ್ತಾಯಿತು. “ತಾನು ಬಸಿರೆಯಾದುದಂ ಕುಮಾರನ ಕಾಲಗುಣದಿಂದ” ಎಂಬ ಭಾವನೆಯು ಇಂದಕ್ಕನ ಪ್ರೀತಿಯನ್ನು ಇಮ್ಮಡಿಗೊಳಿಸಿತು. ಐದುವರ್ಷದವನಾದರೂ ಕುಮಾರನಿಗೆ ತಾನೇ ತುತ್ತು ಮಾಡಿ ಉಣ್ಣಿಸುವಳು. ಬಟ್ಟೆಬರೆಗಳನ್ನು ತಾನೇ ತೊಡಿಸುವಳು. ಎಂದಾ ದರೂ ಒಂದೊಂದು ದಿನ, ನೆರೆಹೊರೆಯ ಹುಡುಗರ ಜೊತೆಗೆ, ಪಾಠಶಾಲೆಯ ಕಡೆಗೋ ದೇವಾಲಯದ ಕಡೆಗೋ ಹೋಗಿದ್ದರೆ, ಆಕೆಯ ಕಣ್ಣನೋಟ ಕುಮಾರನ ದಾರಿಯನ್ನೇ ಕಾಯುತ್ತಿರುವುದು ಅವಳಿಗೆ ಬಸಿರಿನಲ್ಲಿದ್ದ ಮಮ ತೆಯ ಬೊಂಬೆಯ ಭವಿಷ್ಯದ್ದರ್ಶನವು ಒಂದು ಬಗೆಯ ಆನಂದವನ್ನುಂಟು ಮಾಡುತ್ತಿದ್ದರೆ, ಈಗ ಮನೆಯಲ್ಲಿ ಸುಳಿದಾಡುತ್ತಿರುವ ಒಲವಿನ ಮೂರ್ತಿಯ ಪ್ರತ್ಯಕ್ಷ ದರ್ಶನವು ಇನ್ನೊಂದು ಬಗೆಯ ಆನಂದವನ್ನು ಉಂಟುಮಾಡುತ್ತಿ ದ್ದಿತು. ಇಂದಕ್ಕ ಬಸಿರಾದುದರಿಂದ ಅನಂತರಾಯರು ಅದೆಷ್ಟು ಹಿಗ್ಗಿದರೋ! ತಂದೆತನದ ಅಧಿಕಾರವನ್ನು ಪಡೆಯುವ ದಿನಗಳು ತಮಗೂ ಸಮೀಪಿಸಿದು ವೆಂಬ ಸಂತೋಷವು ಅವರ ಮೈಮನಗಳನ್ನು ಜುಮ್ಮೆನಿಸುತ್ತಿರಬಹುದು.

ಮನೆಗೆ ಬಂದವರೆಲ್ಲರೂ ಕುಮಾರನನ್ನು ಮುದ್ದುಮಾಡುತ್ತ ಹೇಳ್ವ ವರು. “ ಕುಮಾರಾ, ಇನ್ನು ನಿನಗೊಂದು ಪುಟ್ಟ ಪಾಪಾ ಸಿಕ್ಕುತ್ತದೆ ಯಲ್ಲವೋ. ”

ತನ್ನ ಜೊತೆಗಾರರಲ್ಲಿ ಅನೇಕರಿಗೆ ಪುಟ್ಟಪುಟ್ಟ ತಮ್ಮತಂಗಿಯರಿದ್ದು ದನ್ನು ಕುಮಾರನು ನೋಡಿದ್ದನು. ‘ ತನಗೂ ಅಂತಹ ತಮ್ಮ, ತಂಗಿ ದೊರೆ ತರೆ ಎಷ್ಟು ಚೆನ್ನಾಗುವುದು. . ’ ಎಂದು ಆಗಾಗ ಯೋಚಿಸುವನು. ಮನೆಗೆ ಬಂದವರೆಲ್ಲರೂ ‘ಪುಟ್ಟ ಪಾಪಾ ಸಿಕ್ಕುತ್ತದೆ’ ಎಂದು ಹೇಳುತ್ತಿರುವುದನ್ನು ಕೇಳಿ, ಕುಮಾರ ಹಿಗ್ಗಿಹಿಗ್ಗಿ ಕುಣಿದಾಡುವನು. ‘ ನನಗೂ ಒಬ್ಬ ಪುಟ್ಟ ತಮ್ಮ ಸಿಗತಾನಂತ !’ ಎಂದು ಜೊತೆಯ ಹುಡುಗರಿಗೆ ಉತ್ಸಾಹದಿಂದ ಹೇಳುವನು. ಮಧ್ಯೆಮಧ್ಯೆ ಇಂದಕ್ಕನ ಬಳಿಗೆ ಬಂದು ಕೇಳುವನು.

“ ಚಿಕ್ಕಮ್ಮಾ! ಪುಟ್ಟ ಪಾಪಾ ಯಾವಾಗ ಬರತದ ? ”

ಕುಮಾರನು ಹೀಗೆ ಕೇಳಿದಾಗಲೆಲ್ಲ ಇಂದಕ್ಕನ ಹೃದಯವು ಕುಣಿಯುವುದು. ಆಗ ಅವಳು ಕುಮಾರನಲ್ಲಿ ತನ್ನ 'ಪುಟ್ಟಪಾಪಾ'ನನ್ನೇ ಕಾಣುವಳು. ವಾತ್ಸಲ್ಯದ ಭರದಿಂದ ಆತನನ್ನು ಬಿಗಿಯಾಗಿ ಅಪ್ಪಿಕೊಂಡು, ಮುತ್ತಿಟ್ಟು ಹೇಳುವಳು.

"ಬೇಗನೆ ಬರ್ತಾನಪ್ಪಾ ಮಗು!"

೨

ಇಂದಕ್ಕನಿಗೆ ದಿನತುಂಬಿ, ಗಂಡುಮಗುವನ್ನು ಹೆತ್ತಳು. ಮಗುವಿನ ಮುಖವನ್ನು ಕಂಡೊಡನೆಯೆ ಅವಳ ಹೃದಯವು ಹಿಂದೆ ಎಂದೂ ಕಂಡರಿಯದ ಭಾವವೊಂದನ್ನು ಅನುಭವಿಸಿತು. ಇಂತಹ ಭಾವದ ಅನುಭವವು ಯಾವಾಗಲೂ ಇರಬೇಕೆಂದು ಇಂದಕ್ಕನ ಹೃದಯವು ಎಳಸಿತೇನೋ! ಯಾವಾಗಲೂ ತೊಡೆಯಮೇಲೆ ಮಗು; ಮಗುವಿನ ಮೈಮೇಲೆ—ಇಂದಕ್ಕನ —ಆನಂದದ ಅತೃಪ್ತಿಯನ್ನು ಸೂಚಿಸುವ— ಕಣ್ಣನೋಟದ ಮುಸುಕು.

ನೆಟ್ಟಬಳ್ಳಿ ಫಲವನ್ನು ಪಡೆದಾಗಲಲ್ಲವೇ ಶ್ರಮದ ಸಾರ್ಥಕ್ಯ? ಅನಂತರಾಯರಿಗಂದು ತಮ್ಮ ಜೀವನದ ಪ್ರತಿಯೊಂದು ಕಾರ್ಯಗಳೂ ಸಾರ್ಥಕ್ಯವನ್ನು ಪಡೆದಂತೆ ತೋರಲು ತೊಡಗಿತು. ಒಣಕಲು ಒಣಕಲಾಗಿ ತೋರುತ್ತಿದ್ದ ಬಾಳಿನದೊಂದು ಮಹತ್ವದ ಭಾಗವು, ಕೊನರಿ ಕುಡಿಯಿಟ್ಟಂತೆ ಕಾಣಿಸಿತು. ತನಗೆ ಪುಟ್ಟ ತಮ್ಮ ದೊರೆಸೇನೆಂದು ಕುಮಾರನ ಮನಸ್ಸು, ಹೃದಯಗಳು ಅಂದು ಆನಂದಗೀತವನ್ನು ಹೇಳುತ್ತಿದ್ದುವು. ಆ ಗೀತದ ಗತ್ತಿನೊಂದಿಗೆ ಅವನ ದೇಹವೂ ಕುಣಿದಾಡುತ್ತಿದ್ದಿತು.

ಚಿಕ್ಕಮ್ಮನು ಬಾಣಂತಿಯಾಗಿ ಮಲಗಿಕೊಳ್ಳಲು, ಆದೇನೋ ಕುಮಾರನಿಗೆ ಹಿಡಿದುಬಿಟ್ಟಂತೆ ಆಗಲು ತೊಡಗಿತು. ಈಗ ಅವನು ತನ್ನದು ತಾನೇ ಉಣ್ಣಬೇಕು. ಉಡಿಗೆ ತೊಡಿಗೆ ತಾನೇ ಹಾಕಿಕೊಳ್ಳಬೇಕು. ಪಾಠಶಾಲೆಯಿಂದಲೋ ಹೊರಗಿನಾಟದಿಂದಲೋ ಮನೆಗೆ ಬಂದರೆ, ಇಂದಕ್ಕನ ಮಮತೆಯ ಸ್ವಾಗತವೇ ಅವನಿಗಿಲ್ಲ. ಪ್ರೀತಿಯ ಅಪ್ಪುಗೆಯಿಲ್ಲ. ಒಲವಿನ ಮುತ್ತುಗಳಿಲ್ಲ. ನೀರೊಳಗಿಂದ ಹೊರಕ್ಕೆ ಚೆಲ್ಲಿದ ಮೀನಿನಂತೆ ಕುಮಾರನು ಚಡಪಡಿಸುತ್ತಿದ್ದನು. ಮನಸ್ಸಿಗೆ ಸಮಾಧಾನವಿಲ್ಲದಂತಾಗಲು ಇಂದಕ್ಕನು

ಮಲಗಿದ ಕಿರುಮನೆಗೆ ಹೋಗುವನು. ಎಳಗೂಸಿನ ಮುದ್ದುಮುದ್ದಾದ ರೂಪವನ್ನು ನೋಡುವನು. ಅದರ ಪುಟ್ಟಪುಟ್ಟ ಕೈಕಾಲು, ಪಳಪಳನೆ ಹೊಳೆಯುವ ಕಣ್ಣು, ತುಂಬುತುಂಬಾದ ಹಾಲುಗಲ್ಲಗಳು, ಮುದ್ದಿನ ಮುದ್ದೆಯಂತಿದ್ದ ಗದ್ದ ಇವೆಲ್ಲವುಗಳಲ್ಲಿಯೂ ತನ್ನ ನಿಡುನೋಟವನ್ನು ನಿಲ್ಲಿಸಿ ನಿಲ್ಲಿಸಿ ನಕ್ಕು ನಲಿಯುವನು. ಆದರೆ ಚಿಕ್ಕಮ್ಮನ ಲಕ್ಷ್ಯವು ತನ್ನ ಕಡೆಗೆ ಇಲ್ಲವೇ ಇಲ್ಲವೆಂಬುದನ್ನು ಕಂಡು, ಬೆದರಿ ಬಿದ್ದವನಂತಾಗುವನು.

ಮನೆಯಲ್ಲಿ ಅನಂತರಾಯರು ಹೆಚ್ಚು ಮಾತುಕತೆಯವರಲ್ಲ. ಊಟದ ಮನೆಗೆ ಹೋದರೆ ಅಡಿಗೆಯ ಮುದುಕಿ. ಕುಮಾರನಿಗೆ ಅವಳನ್ನು ಕಂಡರಾಗುತ್ತಿದ್ದಿಲ್ಲವೆಂದಮೇಲೆ, ಅವಳು ಬಡಿಸುವ ಊಟದಲ್ಲಿ ಇಂದಕ್ಕನ ಪ್ರೀತಿಯ ಕೈತುತ್ತಿನ ರುಚಿಯು ಎಲ್ಲಿ ದೊರೆಯಬೇಕು? ಚಿಕ್ಕಮ್ಮನ ಕಡೆಗೆ ಹೋಗಬೇಕೆಂದು ಅಲ್ಲಿ ಹೋದರೆ, ಯಾವಾಗಲೂ ಕೂಸಿನ ಸೌಖ್ಯೋಪಚಾರಗಳಲ್ಲಿ ವ್ಯಮನಗಳನ್ನು ತೊಡಗಿಸಿರುವುದರಿಂದ, ಕುಮಾರನೊಂದಿಗೆ ಆಕೆಯ ಮಾತುಕತೆಗಳೂ ಅಷ್ಟಕ್ಕಷ್ಟೇ! ಆ ಹುಡುಗನಿಗೆ ಒಂದೊಂದುಸಲ ಎನಿಸುತ್ತಿದ್ದಿತು—'ಚಿಕ್ಕಮ್ಮ ಪುಟ್ಟನನ್ನು ಏತಕ್ಕೆ ಹೆತ್ತಳೋ....?' ಎಂದು.

ಮಗುವನ್ನು ನೋಡಿದಾಗ ಮಾತ್ರ ಕುಮಾರನ ಬೇಸರದ ಮುಸುಕು ಹಾರಿಹೋಗುತ್ತಿದ್ದಿತು. ಹೃದಯವು ಅರಳಿ, ಮುಖವು ಮುಗುಳುನಗೆಯನ್ನು ತಳೆಯುತ್ತಿದ್ದಿತು. "ನಂದು ಪುಟ್ಟ ಪಾಪಾ" ಎಂದು ಕುಮಾರನು ಅದನ್ನು ಕೈಯಿಂದ ಮೈದಡವಲು ಹೋಗುವನು. ಸಿಕ್ಕಹಾಗೆ ಹಿಡಿದು ಗಾಸಿಮಾಡಬಹುದೆಂಬ ಹೆದರಿಕೆಯಿಂದ, ಇಂದಕ್ಕನು ಕುಮಾರನ ಕೈಯನ್ನು ತಡೆದು ಹಿಡಿಯುವಳು. ಆಗ ಕುಮಾರನು ಸಿಡುಕುದನಿಯಲ್ಲಿ ನುಡಿಯುವನು. "ನೀ ಒಬ್ಬಾಕೇ ಹಿಡಿಯುವಾಕಿಯೇನು ಪುಟ್ಟನ್ನ? ನಾ ಯಾಕ ಹಿಡೀಬಾರದು? ಇದು ನನ್ನ ತಮ್ಮ ಅಲ್ಲೇನು ಹಾಂಗಾದ್ರs?"

ಕುಮಾರನ ಹುಡುಗತನದ ಮಾತುಗಳನ್ನು ಕೇಳಿ ಇಂದಕ್ಕನ ಹೃದಯವು ನಗೆಯಿಂದ ಅರಳುವುದು. ಅವಳು ಮುಗುಳುನಗೆಯೊಂದಿಗೆ ಆತನೊಡನೆ ಏನನ್ನಾದರೂ ಒಂದೆರಡು ಮಮತೆಯ ಮಾತುಗಳನ್ನಾಡುವಳು. ಆಗ ಕುಮಾರನಿಗೆ ಯಾರಾದರೂ ರುಚಿಯಾದ ತಿಂಡಿಯನ್ನು ಕೊಟ್ಟಂತೆ ಎನಿಸುತ್ತಿದ್ದಿತು.

೩

ಇಂದಕ್ಕನಿಗೆ ತನ್ನ ಮಗುವು ಮಲಗಿ ನಿದ್ದೆಮಾಡುವುದೊಂದು ಸೋಜಿಗದ ಸಂಗತಿಯು; ನಿದ್ದೆಯಿಂದ ಎಚ್ಚತ್ತುದೂ ಒಂದು ಆಶ್ಚರ್ಯದ ವಿಷಯುವೆ; ಅದು ಕೈಕಾಲುಗಳನ್ನು ಅಲ್ಲಾಡಿಸಿ ಆಡುವುದೆಂದರೆ, ಅದೊಂದು ಅದ್ಭುತ ಚಮತ್ಕಾರವೆ! ಮೊಲೆಯುಣ್ಣುವಾಗ ತನ್ನತ್ತ ಕಡೆಗೆ ನೋಡಿ ನಕ್ಕ ಮಗುವಿನ ಪವಾಡವನ್ನು, ಎಷ್ಟು ಜನರೆದುರಿಗೆ ಹೇಳಿದರೂ ಅವಳಿಗೆ ತೃಪ್ತಿಯೆನಿಸದು.

ಮಗುವಿಗೆ ವರ್ಷ ತುಂಬಲು ಬಂದು, ಅದು ತಪ್ಪುತಪ್ಪು ಹಜ್ಜೆಗಳ ನ್ನಿಡಲು ತೊಡಗಿತು. ತೊದಲು ತೊದಲು ಮಾತನಾಡಲು ತೊಡಗಿತು. ಇಂದಕ್ಕನ ಆನಂದಕ್ಕೆ ಇತಿಮಿತಿಯಿಲ್ಲ. ಹನುಮಂತನು ಸಾಗರವನ್ನು ಹಾರಿದ ಸುದ್ದಿಯನ್ನು ಕೇಳಿ ಅಂಜನಾದೇವಿಗೆ—ವ್ಯಾಸರು ವೇದೋಪ ನಿಷತ್ತುಗಳಿಗೆ ಅರ್ಥ ಬರೆದುದನ್ನು ಕೇಳಿ ಸತ್ಯವತಿಗೆ—ಆಗಿದ್ದ ಆನಂದಕ್ಕೆ ಇಂದಕ್ಕನ ಆನಂದವೂ ಸರಿಸಮಾನವಾಗಿರಬಹುದು. ಆಕೆ ಯಾರೊಡನೆ ಮಾತನಾಡಿದರೂ ತನ್ನ ಮಗುವಿನ ವಿಷಯುವನ್ನೇ!

ಗಂಡ-ಹೆಂಡತಿ ಸೇರಿ ಕುಳಿತರಂತೂ ತೀರಿಯೇ ಹೋಯಿತು. ತಾವಿ ದ್ದುದು ಸುಖದುಃಖಸಮ್ಮಿಶ್ರವಾದ ಭೂಲೋಕವೆಂಬ ಮಾತನ್ನೆ ಮರೆತು ಬಿಡುವರು. ಕೂಸಿನೊಡನೆ ಎಷ್ಟೆಷ್ಟು ಆಟಗಳನ್ನಾಡಿದರೂ ಅವರಿಗೆ ಸಾಕೆ ನಿಸದು. ಆ ಸಮಯದಲ್ಲಿ ಕುಮಾರನು ಅಲ್ಲಿಗೆ ಬಂದನೆಂದರೆ, ಆಶೆ-ದೈನ್ಯ ಗಳು ಬೆರೆತ ನೋಟದಿಂದ ನೋಡುತ್ತ ಸುಮ್ಮನೆ ನಿಂತುಕೊಳ್ಳುವನು. ಆತ ನನ್ನು ಮುಂದಕ್ಕೆ ಕರೆದು ಕುಳ್ಳಿರಿಸಿಕೊಳ್ಳಬೇಕೆಂಬ ಎಚ್ಚರವು ಇಂದಕ್ಕ ನಿಗೂ ಇರುವುದಿಲ್ಲ, ರಾಯರಿಗೂ ಇರುವುದಿಲ್ಲ. ಕುಮಾರ ಎಷ್ಟೋ ಹೊತ್ತು ಅಲ್ಲಿಯೇ ನಿಲ್ಲುವನು. ಬಳಿಕ ಬಾಡಿಬತ್ತಿದ ಮೊಗದವನಾಗಿ, ಹಿಂತಿರುಗಿ ಬಂದು, ನಿಟ್ಟುಸಿರಿಡುತ್ತ, ತನ್ನ ಪುಸ್ತಕದಲ್ಲಿ ಮುಖವನ್ನು ಮರೆಮಾಡಿ ಕುಳಿತುಕೊಳ್ಳುವನು.

ಇಂದಕ್ಕನಿಗೆ ಮಗುವು ಹುಟ್ಟುವುದಕ್ಕೆ ಮೊದಲು, ಕುಮಾರನು ಏನನಾದರೂ ತೊದಲುತೊದಲಾಗಿ ಹಾಡಿದರೂ ಅವಳು ಅದನ್ನೊಂದು ಕೌತುಕದ ಕತೆಯನ್ನಾಗಿ ಜನರ ಮುಂದೆ ಹೇಳುತ್ತಿದ್ದಳು. ಮೊದಲನೆಯ

ಸಲ ‘ಅ, ಆ’ ಎಂದು ಅಡ್ಡತಿಡ್ಡವಾಗಿ ಬರೆದುದು ಆಕೆಗೆ ಅದೆಷ್ಟೋ ಆನಂದ ಆಶ್ಚರ್ಯಗಳನ್ನುಂಟುಮಾಡಿದ್ದಿತು. ಇಂದು ಆತನು ಮೊದಲನೆಯ ಪುಸ್ತಕವನ್ನು ಗಡಗಡನೆ ಓದುತ್ತಿದ್ದರೂ ಅದನ್ನು ಕಂಡು ಕೌತುಕಪಡುವವರೇ ಇಲ್ಲ; ಇಂಪಾಗಿ ಹೇಳುವ ಬಾಲಗೀತೆಗಳನ್ನು ಕೇಳಿ ಆನಂದಪಡುವವರೇ ಇಲ್ಲ.

ಕುಮಾರನ ಪಾಲಿಗೆ ಅಡಿಗೆಯ ಮುದುಕಿಯೊಂದು ಕಾಡುವ ಕಾಟವಾಗಿದ್ದಿತು. ಅವಳು ಆತನ ಕಿಡಿಗೇಡಿತನವನ್ನು ಏನನಾದರೂ ಹುಟ್ಟಿಸಿ ಹುಟ್ಟಿಸಿ ಇಂದಕ್ಕನೆದುರಿಗೆ ಹೇಳುವಳು. ಇಂದಕ್ಕ ಒಂದೊಂದು ಸಲ ಕೇಳಿ ಸುಮ್ಮನಾಗಿಬಿಡುವಳು; ಇನ್ನೊಂದೊಂದು ಸಲ “ಕುಮಾರಾ! ನೀನೇನೂ ಸಣ್ಣವನಲ್ಲ, ತಿಳಿಯಿತೇ? ಇನ್ನುಮುಂದೆ ಇಂತಹ ಕೆಟ್ಟಕೆಲಸ ಮಾಡಿದರೆ, ನನಗೇನೂ ತಡೆಯಲಿಕ್ಕಿಲ್ಲ ನೋಡಪ್ಪಾ!” ಎನ್ನುವಳು. ಇಂದಕ್ಕನು ಮುದುಕಿಯ ದೂರಿಗೆ ಮರ್ಯಾದೆ ಕೊಡಬೇಕೆಂದು ಹೀಗೆ ಎನ್ನುತ್ತಿರಬಹುದಾದರೂ, ಚಿಕ್ಕಮ್ಮನ ಬಾಯಿಂದ ಎಂದೂ ಕೇಳದಿದ್ದ ಧ್ವನಿಯಲ್ಲಿ ಇಂತಹ ಮಾತುಗಳು ಹೊರಟುದನ್ನು ಕೇಳಿ, ಕುಮಾರನ ಕರುಳಿಗೆ ಮುಳ್ಳು ಚುಚ್ಚಿದಂತಾಗುತ್ತಿದ್ದಿತು.

ಇಂದು ಕುಮಾರನು ತನ್ನ ಹುಡುಗತನದ ಚೆಲ್ಲಾಟವನ್ನು ಬಿಟ್ಟು, ಸುಮ್ಮನೆ ಕುಳಿತುಕೊಂಡಿದ್ದನು. ಮಲತಾಯಿಯಿಂದ ಬೈಗುಳನ್ನು ತಿಂದ ಧ್ರುವನಂತೆ ಮುಖವು ಚಿಂತಾಮುದ್ರೆಯನ್ನು ತಳೆದಿದ್ದಿತು. ಅವನ ಪುಟ್ಟ ತಲೆಯಲ್ಲಿ ಒಂದರ ಹಿಂದೊಂದು ಯೋಚನೆಗಳು ಬಂದುಹೋಗುತ್ತಿದ್ದುವು.

“ಮೊದಲು ನಮ್ಮ ಚಿಕ್ಕಮ್ಮ ಎಷ್ಟು ಚೆನ್ನಾಗಿದ್ದಳು. . . . ! ಈಗ ಹೀಗೇಕೆ ಆಗಿದ್ದಾಳೆ . . . . ? ಪುಟ್ಟ ತಮ್ಮ ಬಂದರೆ, ನಾನು ಅದರೊಡನೆ ಆಟವಾಡುತ್ತ ಇರಬೇಕೆಂದಿದ್ದೆ. ಆ ಪುಟ್ಟ ತಮ್ಮ ಹುಟ್ಟದಿದ್ದರೆ ಒಳಿತಾಗುತ್ತಿತ್ತು. . ಚಿಕ್ಕಮ್ಮ ನನ್ನ ಕೂಡ ಚೆನ್ನಾಗಿ ಮಾತನಾಡುತ್ತಿದ್ದಳು; ನನಗೆ ಮುತ್ತುಕೊಡುತ್ತಿದ್ದಳು; ನನ್ನ ಹಾಡು ಕೇಳುತ್ತಿದ್ದಳು. ನಾನು ಓದುವುದನ್ನು ಕೇಳಿ ‘ಭಲೆ’ ಎನ್ನುತ್ತಿದ್ದಳು. ನನಗೆ ಬೇಕಾದ ತಿಂಡಿ ಕೊಡುತ್ತಿದ್ದಳು. . ಈಗ. . ಏನೂ ಇಲ್ಲ; ಪುಟ್ಟ ತಮ್ಮ ಬಂದಾಗಿನಿಂದಲೂ ಚಿಕ್ಕಮ್ಮ ಹೀಗೆಯೆ ಮಾಡುತ್ತಿದ್ದಾಳೆ. . ಅದು ಬಲು ಕೆಟ್ಟ ಮಗು....”

ತನ್ನ ಯೋಚನೆಗಳೊಂದಿಗೆ ಕುಮಾರನು ಆಗಾಗ ಬಿಸಿಯುಸಿರುಗಳನ್ನು ಚೆಲ್ಲುತ್ತಿದ್ದನು; ಅಳುಮೊಗದವನಾಗುತ್ತಿದ್ದನು; ಕೋಪದ

ಕೆವ್ಮೊಗದವನಾಗುತ್ತಿದ್ದನು.

೪

ಅಡಿಗೆಯುವಳು ಅವಸರವಸರದಿಂದ ನಡೆಯುತ್ತಬಂದು ಇಂದಕ್ಕನಿಗೆ ಹೇಳಿದಳು.

"ಕೂಸಿಗಂತಿಟ್ಟ ಹಾಲಿನಾಗ, ಕುಮಾರ ಬೂದೀ ಹಾಕ್ಯಾನ ನೋಡ್ರೆವ್ವಾ!"

"ಬೂದೀ ಹಾಕ್ಯಾನ... ? ಅದ್ಯಾಕ ?"

"ಅದೇನೋ ನವ್ಮವ್ವಾ! ನೀರಮನಿಂದ ಒಳಗ ಹೋದೆ. ಕುಮಾರ ಅಲ್ಲೇ ನಿಂತಿದ್ದಾ; ನನ್ನ ನೋಡಿ ಘಾಬರಿ ಆದ್ಹಾಂಗ ಕಾಣಿಸಿತು. ಅಂಗಿಗೆ ಕೈ ಒರಸಿಗೋತಿದ್ದಾ. ನಾ ಇಲ್ಲ್ಯಾಕೋ-ಅಂತ ಕೇಳಿದೆ. ಮಾತನಾಡದ ಓಡಿಹೋದ. ನೋಡತೀನ! ಇದ್ಲೀವಲೀವ್ಯಾಲಿಟ್ಟ ಹಾಲಿನೊಳಗೆಲ್ಲಾ ಬೂದಿ ತುಂಬಿಬಿಟ್ಟದ."

ಇಂದಕ್ಕನ ಮನಸ್ಸಿಗೆ ಹೇಗೆ ಹೇಗೋ ಎನಿಸಿತು. ಕುಮಾರನು ಇತ್ತೀಚೆಗೆ ಪುಟ್ಟನನ್ನು ಮೊದಲಿನಂತೆ ಪ್ರೀತಿಸುವುದಿಲ್ಲವೆಂಬುದು ಅವಳಿಗೆ ಗೊತ್ತಿದ್ದಿತು. ಆದರೂ ಹಾಲಿನಲ್ಲಿ ಬೂದಿಬಿದ್ದುದನ್ನು ಅವಳು ವಿಪರೀತ ವಾಗಿಯೇನೂ ತಿಳಿದುಕೊಳ್ಳಲಿಲ್ಲ. ಏನೋ ತುಂಟಾಟಮಾಡುತ್ತಿರುವಾಗ ತಪ್ಪಿ ಬಿದ್ದಿರಬಹುದೆಂದು ಭಾವಿಸಿದಳು. ಆದರೂ ಕುಮಾರನನ್ನು ಕರೆದು, ಅವನ ಕಿಡಿಗೇಡಿತನಕ್ಕಾಗಿ ಸಿಟ್ಟುಮಾಡದೆ ಬಿಡಲಿಲ್ಲ.

* * * *

ಮರುದಿನವೆ ಅಕ್ಷಯತೃತೀಯೆ. ಮನೆಯಲ್ಲಿ ದೊಡ್ಡ ಹಬ್ಬ. ಮಗುವಿಗೆ ಹೊಸಅಂಗಿ-ಟೊಪ್ಪಿಗೆ ಹಾಕಬೇಕೆಂದು, ಇಂದಕ್ಕ ಹೊಸಬಟ್ಟೆಯ ಗಂಟನ್ನು ಬಿಚ್ಚಿದಳು. ಒಂದೊಂದಾಗಿ ಮಗುವಿನ ಅಂಗಿಗಳನ್ನು ತೆಗೆದು ತೆಗೆದು ನೋಡಿದಳು ಮುಖವು ಗಾಬರಿಯಾದವರಂತಾಯಿತು. ಎಲ್ಲ ಅಂಗಿಗಳನ್ನೂ ಅಡ್ಡತಿಡ್ಡವಾಗಿ ಯಾರೋ ಕತ್ತರಿಸಿದಂತಿದ್ದಿತು. ಹೊಸ ತಾಗಿಯೆ ಕೊಂಡ ಜರಿಯ ಟೊಪ್ಪಿಗೆಯ ಗೊಂಡೆಯವು ಕಿತ್ತು, ಅಸ್ತ ವ್ಯಸ್ತವಾಗಿದ್ದಿತು. ನೋಡಿ ಇಂದಕ್ಕನ ಎದೆಗೆ ಗುಂಡುಬಡಿದಂತಾಯಿತು. ಕಕ್ಕಾವಿಕ್ಕಿಯಾಗಿ ತನ್ನಲ್ಲಿ ತಾನೆ ಎಂದುಕೊಂಡಳು. "ಇದನ್ನೆಲ್ಲ ಹೀಗೆ

ಯಾರು ಮಾಡಿದ್ದಾರು ? ”

ನಿನ್ನೆಯ ಬೆಳಗಿನಲ್ಲಿ, ಮಗುವಿನ ಹಾಲಲ್ಲಿ ಕುಮಾರ ಬೂದಿಯನ್ನು ಹಾಕಿದುದು ಜ್ಞಾಪಕಕ್ಕೆ ಬಂದಿತು. ಆಗ ಇಂದಕ್ಕ ಅದಕ್ಕೆ ವಿಪರೀತ ಅರ್ಥವನ್ನೇನೂ ಕಲ್ಪಿಸಿರಲಿಲ್ಲ. ಈಗ ಈ ಹರಿದ ಅಂಗಿಟೊಪ್ಪಿಗೆಗಳನ್ನು ನೋಡಿ, ಅದರ ಮೇಲೂ ವಿಪರೀತಾರ್ಥದ ಕಿರಣಗಳು ಬಿದ್ದುವು. “ ಈ ಕೆಲಸವಾದರೂ ಅವನದೆ ” ಎಂದು ಖಂಡಿತವಾಗಿ ತಿಳಿದುಬಿಟ್ಟಳು. “ ಹೀಗಾದರೆ ಮುಂದೆ ಹೇಗೆ....? ” ಎಂದು ಯೋಚಿಸಿ ಯೋಚಿಸಿ ಮುಂಗಾಣದವಳಾದಳು. “ ಈಗ ಇದನ್ನೆಲ್ಲ ಹೊರಕ್ಕೆ ಹಾಕುವುದು ಒಳಿತಲ್ಲ; ಅವರ ಮನಸ್ಸು ಒಂದು ರೀತಿಯದು. ಒಮ್ಮೆಲೆ ಆ ಹುಡುಗನ ವಿಷಯದಲ್ಲಿ ದುರಭಿಪ್ರಾಯವನ್ನು ಮಾಡಿಕೊಳ್ಳಬಹುದು. ಅವನನ್ನು ಮನೆಯಲ್ಲಿಟ್ಟುಕೊಳ್ಳಲಾಗದೆಂದು ಹೇಳಿಬಿಟ್ಟರೆ ಏನು ಮಾಡುವುದು ? ಒಳಗಿಂದೊಳಗೆ ಕುಮಾರನನ್ನು ಕರೆದು, ಸಿಟ್ಟುಮಾಡಿ ತಿಳುಹಿಸಿ ಹೇಳಬೇಕು. ” ಎಂಬುದಾಗಿ ಇಂದಕ್ಕ ವಿಚಾರವನ್ನು ಮಾಡಿದಳು.

ಅಂದು ಮಗುವಿನ ಹಬ್ಬವು ಹಳೆಯ ಬಟ್ಟೆಗಳ ಮೇಲೆಯೇ ಆಯಿತು. ‘ ಹೀಗೇಕೆ ’ ಎಂದು ಕೇಳಿದವರಿಗೆಲ್ಲ ಇಂದಕ್ಕನು: “ ಹರಕಿ ಅದs; ಅದನ್ನು ಸಲ್ಲಿ ಸೂತನಕಾ ಹೊಸಾ ಬಟ್ಟೇ ಹಾಕೂ ಹಾಂಗಿಲ್ಲ” ಎಂದು ಹೇಳುತ್ತಿದ್ದಳು.

* * * *

ಅಂದೇ ಸಾಯಂಕಾಲ; ಹಿತ್ತಲಲ್ಲಿ ಕಸತೆಗೆಯುತ್ತಿದ್ದ ಆಳು, ಮಗುವಿನ ಬೆಳ್ಳಿಯ ರಂಗಾಣಿಯನ್ನು ಕೈಯಲ್ಲಿ ಹಿಡಿದುಕೊಂಡು, ಇಂದಕ್ಕನ ಬಳಿಗೆ ಬಂದ. “ ಇದೇನ್ರಿ ಬಾಯವರs! ಇದು ಹಿತ್ತಲದಾಗ ಯಾಕ ಬಿದ್ದಿತ್ರಿ? ” ಎಂದು ರಂಗಾಣಿಯನ್ನು ಮುಂದೆ ಚೆಲ್ಲಿದ. ಆಶ್ಚರ್ಯದ ನೋಟದಿಂದ ಅವಳು ರಂಗಾಣಿಯನ್ನು ನೋಡಿದಳು. ಅದರ ಎರಡು ಕಡೆಯ ಗುಂಡುಗಳನ್ನೂ ಕಲ್ಲಿನಿಂದ ಚಚ್ಚಿದಂತಾಗಿದ್ದಿತು. ಆಕೆ—ಒಂದೆರಡು ನಿಮಿಷ—ಹಾಗೆಯೆ ಕುಳಿತು ಯೋಚಿಸಿದಳು. ಬಳಿಕ “ ಇದರ ಸಲುವಾಗಿ ಯಾರ ಮುಂದೂ ಮಾತಾಡಬ್ಯಾಡs! ” ಎಂದು ಆಳಿಗೆ ಹೇಳಿ, ಕಳುಹಿಸಿದಳು.

ಇಂದಕ್ಕನು ಆ ಹೊತ್ತು ಕುಮಾರನನ್ನು ಒಬ್ಬನನ್ನೆ ಕರೆದು, ಬುದಿ ಹೇಳದೆ ಬಿಟ್ಟಿರಲಿಕ್ಕಿಲ್ಲ.

೫

ಮೂರನೆಯ ದಿನ ಹಗಲು ಮೂರುವರೆ ಗಂಟೆಯಾಗಿರಬಹುದು. ಮಗುವು ತೊಟ್ಟಿಲಲ್ಲಿ ಮಲಗಿ ನಿದ್ದೆಮಾಡುತ್ತಿದ್ದಿತು. ಇಂದಕ್ಕ ಬಳಿಯಲ್ಲಿಯೇ ಕುಳಿತುಕೊಂಡು ಏನನ್ನೋ ಹೆಣೆಯುವುದರಲ್ಲಿ ತೊಡಗಿದ್ದಳು. ಕುಮಾರನು ನೀರುಕುಡಿಯಲಿಕ್ಕೆಂದು ಶಾಲೆಯಿಂದ ಮನೆಗೆ ಬಂದ. ಇತ್ತೀಚೆಗೆ ಆತನ ತಿಂಡಿತೀರ್ಥಗಳ ವಿಚಾರವನ್ನೇನೂ ಇಂದಕ್ಕ ಮಾಡುತ್ತಿರಲೇ ಇಲ್ಲ. ಎಲ್ಲವನ್ನೂ ಅಡಿಗೆಯವಳ ಮೇಲೆಯೇ ಒಪ್ಪಿಸಿಬಿಟ್ಟಿದ್ದಳು. ಅಂದು ಕುಮಾರನು ಬಂದವನು ತನ್ನ ಇಳಿಹೊತ್ತಿನ ಉಪಾಹಾರವನ್ನು ತೀರಿಸಿಕೊಂಡನೋ ಇಲ್ಲವೋ! ಇಂದಕ್ಕನ ಬಳಿಯಲ್ಲಿ ಬಂದು ಸುಮ್ಮನೆ ಕುಳಿತ. ಪ್ರಶ್ನಾತುರಭಾವವು ಕಣ್ಣುಗಳಲ್ಲಿ ಕ್ರೀಡಿಸುತ್ತಿದ್ದಿತು. ಇಂದಕ್ಕನು ಮುಖವೆತ್ತಿ ನೋಡಿ, ಕುಮಾರನನ್ನು ಕೇಳಿದಳು.

“ಸಾಲಿಗೆ ಹೋಗೂದಿಲ್ಲೇನು ಇನ್ನ?”

“ಹೋಗತೀನಿ.”

“ಹಾಂಗಾದರ ಇಲ್ಲ್ಯಾಕ ಬಂದು ಕೂತುಕೊಂಡಿ?”

ಕುಮಾರನು ವಿಷಾದವು ಬೆರೆತ ಉತ್ಸಾಹದ ಧ್ವನಿಯಲ್ಲಿ ಹೇಳಿದನು.

“ಇಂದ ನಮ್ಮ ಮಾಸ್ತರು ‘ತಾಯೆ ನಿನ್ನುಪಕಾರ ಮರೆಯೆನಾನೆಂದು’ ಅಂಬೂ ಕವಿತಾ ಹೇಳಿಕೊಟ್ಟರು.”

“ಹಿಂಗೇನು? ಒಳ್ಳೇದಾತು! ಕಲಿತು ಜಾಣನಾಗಪ್ಪಾ! ತುಂಟತನಾ ಮಾಡಬ್ಯಾಡ, ತಿಳೀತೇನು?”

ಕುಮಾರ ಕುತೂಹಲದಿಂದ ಕೇಳಿದ.

“ತಾಯಿ–ಅಂದರs..ಯಾರು ಚಿಕ್ಕಮ್ಮಾ?”

“ತಾಯಿ–ಅಂದರs ತನ್ನ ಹಡೆದಾಕಿ....! ಅವ್ವಾ!”

“ಅಂದರs....“

“ಅಂದರs....ಪುಟ್ಟ ನನ್ನ ಹೊಟ್ಟಿಂದs ಹುಟ್ಟಿಲ್ಲs..? ಪುಟ್ಟಗ ನಾನು ತಾಯಿ!”

“ಹಾಂಗಾದರ ನೀ ನನಗ ತಾಯಿ ಅಲ್ಲೇನಮ್ಮಾ?”

ಅನುಮಾನದ ಜಡವಾದ ಮಾತಿನಲ್ಲಿ ಇಂದಕ್ಕ ಹೇಳಿದಳು.

"ತಾಯಿ....ಹುಂ....ಹೌದು....ನಾ ನಿನಗ ಚಿಕ್ಕತಾಯಿ ಕುಮಾರಾ!"

"ದೊಡ್ಡತಾಯಿ ಒಬ್ಬಾಕಿ ಬ್ಯಾರೇ ಇದ್ದಾಳೇನು?"

ಇಂದಕ್ಕನಿಗೆ ಅಕ್ಕನ ನೆನಪಾಗಿ ಎದೆಯು ಉಕ್ಕಿಬಂದಿತು. ಕಣ್ಣು ಕಂಬನಿಯಿಂದ ತುಂಬಿತು. ಮಾತನೇನೂ ಆಡದೆ, ಸೆರಗಿನಿಂದ ಕಂಬನಿಗಳ ನ್ನೊರಸಿಕೊಂಡಳು.

"ಇದೇನs ಚಿಕ್ಕಮ್ಮಾ! ಅಳತೀಯಾಕs?"

"ಯಾಕಿಲ್ಲ ಮಗು! ಅಕ್ಕನ ನೆನಪಾತು."

"ಅಕ್ಕ....ಅಂದರs ಯಾರಮ್ಮಾ?"

"ನಿನ್ನ ತಾಯಿ—ಕುಮಾರಾ!"

"ಅಂದರ ಆಕಿ ದೊಡ್ಡತಾಯೇನು?"

"ಹುಂ....ದೊಡ್ಡತಾಯಿ."

"ಆಕಿ ಎಲ್ಲಿದ್ದಾಳ?"

"ಇನ್ನೆಲ್ಲಿ ಇರತಾಳಪ್ಪಾ! ನಮ್ಮನ್ನೆಲ್ಲಾ ಬಿಟ್ಟುಹೋಗಿ ಮೂರು ನಾಲ್ಕು ವರ್ಷಾತು!"

"ಆಕಿ ಯಾವೂರಿಗೆ ಹೋಗ್ಯಾಳ ಚಿಕ್ಕಮ್ಮಾ?"

ಇಂದಕ್ಕನ ಹೃದಯು ಕರಗಿತು. ಅವಳೀಗ. ಮರುಕದ ಮೂರ್ತಿ; ಕುಮಾರನಿಗೆ ಹೇಳಿದಳು.

"ಊರಿಗೆಲ್ಲೆ ಹೋಗತಾಳಪ್ಪಾ! ಈ ಲೋಕಾ ಬಿಟ್ಟು ಪರಲೋಕಕ್ಕ ಹೋದಳು."

"ಪರಲೋಕಾಂದ್ರ ಎಲ್ಲೆ ಅದ?"

"ಮುಗಿಲಿಗಿಂತಾ ಮ್ಯಾಲ ಇರತsದಂತಪ್ಪಾ!" ಇಂದಕ್ಕ ನಿಟ್ಟುಸಿರಿ ನೊಂದಿಗೆ ಹೇಳಿದಳು. ಕುಮಾರ ಕುತೂಹಲಿಯಾಗಿ ಕೇಳಿದ.

"ನಮಗೂ ಪರಲೋಕಕ್ಕ ಹೋಗಲಿಕ್ಕೆ ಬರೂದಿಲ್ಲೇನು?"

"ಸ್ತ್ರತಮ್ಯಾಲ ಎಲ್ಲಾರೂ ಅಲ್ಲೇ ಹೋಗತಾರ ಮಗು!"

ಇಂದಕ್ಕನಿಗೀಗ 'ಕುಮಾರನು ತಾಯಿಯಿಲ್ಲದ ಪರದೇಶಿ' ಎಂಬ ಕಳವಳದ ಭಾವನೆಯು ಜಾಗೃತವಾಗಿದ್ದಿತು. ಅವನು ಕೇಳಿದುದಕ್ಕೆಲ್ಲ ಸಹಾನುಭೂತಿಯ ಸ್ವರದಲ್ಲಿ ಉತ್ತರಕೊಡುತ್ತಿದ್ದಳು. ಕುಮಾರನು ಕೊಂಚ ಕಾಲ ಸುಮ್ಮನೆ ಕುಳಿತಿದ್ದು, ಒಮ್ಮೆಲೇ ಕೇಳಿದನು. "ಸತ್ತಮ

ರೆಲ್ಲರೂ ಪರಲೋಕಕ್ಕೇ ಹೋಗತಾರಲ್ಲೇ—ಚಿಕ್ಕವ್ವಾ? ”

“ ದೊಡ್ಡವರೆಲ್ಲಾ ಹೀಂಗ ಹೇಳತಾರಪ್ಪಾ....” ಇಂದಕ್ಕನು ಹೀಗೆ ಹೇಳುತ್ತಿರುವಾಗಲೆ ಮಲಗಿದ್ದ ಮಗುವು ಎಚ್ಚತ್ತು ಅಳಲುತೊಡಗಿತು. ಆಗ ಅವಳು ಕೈಯೊಳಗಿನ ಕೆಲಸವನ್ನು ಬಿಟ್ಟು, ಬಾಯಲ್ಲಿಯ ಮಾತನ್ನು ಬಿಟ್ಟು, ಆತುರದಿಂದೆದ್ದು ಮಗುವನ್ನು ತೊಡೆಯಲ್ಲಿ ತೆಗೆದುಕೊಂಡಳು. ಅತಿಶಯ ವಾತ್ಸಲ್ಯದಿಂದ ಹೊಟ್ಟೆಗೆ ಕೊಡಲು ತೊಡಗಿದಳು. ಕೂಸು ಅಳುವುದನ್ನು ಬಿಟ್ಟು, ಮೊಲೆಹಾಲು ಕುಡಿಯುತ್ತ ಇಂದಕ್ಕನ ಮುಖವನ್ನು ನೋಡಿ ನಕ್ಕಿತು. ಆಗ ಇಂದಕ್ಕನನ್ನು ಆವರಿಸಿಕೊಂಡಿದ್ದ ಅಕ್ಕನ ಅಗಲಿಕೆಯ ವ್ಯಸನವು, ಸೂರ್ಯನನ್ನು ಕಂಡ ಮಂಜಿನಂತಾಯಿತು. ಕುಮಾರನ ವಿಷಯದಲ್ಲಿ ಉಂಟಾದ ಮರುಕವೂ ಮರೆಯಾಗಿ ಹೋಯಿತು. ಅವಳ ಅಂಗಾಂಗಗಳಲ್ಲಿ ಹರಿದಾಡುತ್ತಿದ್ದುದೆಂದರೆ ಒಂದೇ ಒಂದು ವಾತ್ಸಲ್ಯಭಾವ.

ಪುಟ್ಟನೊಡನೆ ವಿಪರೀತಿಯಲ್ಲಿ ಚಿಕ್ಕಮ್ಮನು ಮುದ್ದಾಡಿ ಮುಂಡಾಡುತ್ತಿರುವುದನ್ನು, ಕುಮಾರನು ಕುಳಿತುಕೊಂಡು ನೋಡಿಯೇ ನೋಡಿದನು. ಕೊನೆಗೆ ನಿರಾಶೆಯ ನಿಟ್ಟುಸಿರೊಂದನ್ನು ಬಿಟ್ಟು, ಅಲ್ಲಿಂದ ಎದ್ದು ನಡೆದನು. ಮಗುವಿನ ಮೋಹನರಸದಿಂದ ಮೈಮರೆದು ಹೋಗಿದ್ದ ಇಂದಕ್ಕನಿಗೆ ಕುಮಾರನು ಎದ್ದು ಹೋದುದರ ಎಚ್ಚರವೇ ಇರಲಿಲ್ಲ.

೬

ಅಂದು ರಾತ್ರಿಯ ಒಂಬತ್ತುಗಂಟೆಯಾದರೂ ಕುಮಾರನು ಮನೆಗೆ ಬರಲಿಲ್ಲ. ‘ಎಂದೂ ಇಷ್ಟು ಹೊತ್ತು ಹೊರಕ್ಕೆ ಹೋಗದಿದ್ದವನು ಇಂದು ಎಲ್ಲಿಗೆ ಹೋದನು?’ ಎಂದು ಮನೆಯಲ್ಲಿ ಎಲ್ಲರೂ ಮಾತನಾಡಿದರು. ‘ಮನೆಗೆ ಬಂದೊಡನೆಯೆ ಕುಮಾರನಿಗೆ ಚೆನ್ನಾಗಿ ಬುದ್ಧಿಗಲಿಸಬೇಕು.’ ಎಂದು ಇಂದಕ್ಕ ತನ್ನ ಮನಸ್ಸಿಗೆ ನಾಲ್ಕಾರುಸಲ ಗಂಟುಹಾಕಿಟ್ಟಳು. ಎಲ್ಲರ ಊಟವೂ ಆಯಿತು. ಹತ್ತುಗಂಟೆಯಾದರೂ ಕುಮಾರನ ಸುಳಿವೇ ಇಲ್ಲ. ಕುಮಾರನ ಜೊತೆಯ ಹುಡುಗರನ್ನು ಕೇಳಿದರೆ ‘ಮೂರುವರೆ ಗಂಟೆಗೆ ಮನೆಗೆ ನೀರು ಕುಡಿಯಲಿಕ್ಕೆ ಹೋದವನು, ಮರಳಿ ಶಾಲೆಗೆ ಆತನು ಬರಲೇ ಇಲ್ಲ’ ಎಂದು ಹೇಳಿದರು. ಎಲ್ಲರೂ ಗಾಬರಿಯಾದರು. ಕುಮಾರನು ಇಳಿಹೊತ್ತಿನಲ್ಲಿ ತನ್ನೊಡನೆ ಮಾತನಾಡಿದ ಮಾತುಗಳ ನೆನಪಾಗಿ, ಇಂದಕ್ಕನು

ಏನೇನನೋ ಭಾವಿಸಲು ತೊಡಗಿದಳು. ಅವಳ ಕರುಳುಗಳನ್ನು ಯಾರೋ ಹಿಡಿದು ಕಿವುಚಿದಂತೆ ಆಗಲಾರಂಭಿಸಿತು.

ರಾತ್ರಿಯಲ್ಲಿ ಬೆಳಕು ತೆಗೆದುಕೊಂಡು, ಬೀದಿಬೀದಿಗಳಲ್ಲಿಯೂ ಸಂದಿಗೊಂದಿಗಳಲ್ಲಿಯೂ ಹುಡುಕಿದುದಾಯಿತು. ಗುಡಿಗುಂಡಾರಗಳನ್ನೆಲ್ಲ ನೋಡಿದುದಾಯಿತು. ಕುಮಾರನ ಸುದ್ದಿಯೇ ಸಿಕ್ಕಲಿಲ್ಲ. ಇಂದಕ್ಕನ ಮನೆಯಲ್ಲಿ ಅಂದು ಯಾರಿಗೂ ನಿದ್ದೆಯೇ ಇಲ್ಲ. ಮಗುವಿನ ಬಾಲಲೀಲೆಗಳೂ ಇಂದಕ್ಕನ ಮನದ ಉದ್ವಿಗ್ನತೆಯನ್ನು ಹೊಡೆದುಹಾಕಲು ಸಮರ್ಥವಾಗಲಿಲ್ಲ.

“ಊರಲ್ಲಿ ಪಠಾಣರ ಹಾವಳಿ ಬಹಳ; ಅವರೇ ಕುಮಾರನನ್ನು ಕದ್ದೊಯ್ದಿರಬಹುದು.”ಎಂದು ಕೂಡಿದ ಜನರು ಮಾತನಾಡಿದರು. ಆಗಲೆ ಅದರಂತೆ ಪೋಲೀಸರಿಗೆ ತಿಳುಹಿಸಿಯೂ ಆಯಿತು. ಜನರೆಲ್ಲ ತಮ್ಮತಮ್ಮ ಮನೆಗೆ ಹೋದರು. ಪೋಲೀಸರಿಗೇನು ನಿದ್ದೆ ನೀರಡಿಕೆಯಿಲ್ಲವೇ? ಅವರೂ ನಾಳೆ ಬೆಳಗಿನಲ್ಲಿ ವಿಚಾರ ಮಾಡಿದರೆ ಆದೀತೆಂದು, ಮಲಗಿಕೊಂಡು ನಿಶ್ಚಿಂತೆಯಿಂದ ನಿದ್ದೆಹೋಗಿರಬಹುದು.

ರಾತ್ರಿಯೆಲ್ಲವೂ ಇಂದಕ್ಕನ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಅತ್ತಿತ್ತ ಹೊರಳಾಡುವುದರಲ್ಲಿಯೆ ರಾತ್ರಿ ಮುಗಿಯಿತು. ಬೆಳಗಿನ ಜಾವದಲ್ಲಿ, ಸ್ವಲ್ಪವೇ ಕಣ್ಣುಮುಚ್ಚಿದುವು. ಅರೆನಿದ್ದೆಯಲ್ಲಿಯೆ ಇಂದಕ್ಕನು ಒಂದು ಕನಸನ್ನು ಕಂಡಳು.

“ಅಗಲಿಹೋದ ಪ್ರೀತಿಯ ಅಕ್ಕ ಮನೆಗೆ ಬಂದಿದ್ದಾಳೆ. ‘ಎಂದೂ ಕಾಣಲಾಗದಿದ್ದವಳನ್ನು ಇಂದು ಮತ್ತೆ ನೋಡುತ್ತಿದ್ದೇನಲ್ಲ!’ ಎಂಬ ಆನಂದಾಶ್ಚರ್ಯಗಳು ಇಂದಕ್ಕನನ್ನು ಮುತ್ತಿಬಿಟ್ಟಿವೆ. ಅಕ್ಕನು ಮುಂದೆ ಬಂದು ನಿಂತ ಕುಮಾರನನ್ನು ಪ್ರೀತಿಯ ನೋಟದಿಂದ ನೋಡಿ, ಮುಂದಲೆಯ ಮೇಲೆ ಕೈಯನ್ನಾಡಿಸಿ, ಸಲುಗೆಯಿಂದ ತೊಡೆಯಮೇಲೆ ಕುಳ್ಳಿರಿಸಿಕೊಂಡಿದ್ದಾಳೆ. ಕುಮಾರನು ತೃಪ್ತಿಯ ಧ್ವನಿಯಲ್ಲಿ ‘ಚಿಕ್ಕಮ್ಮಾ! ನನ್ನ ತಾಯಿ ನನಗ ಸಿಕ್ಕಳು; ನೀನು ಪುಟ್ಟನ ತಾಯಿ ’ ಎಂದು ಹೇಳುತ್ತಿದ್ದಾನೆ.”

ಇದೆಲ್ಲ ಕನಸಿನ ಚಿತ್ರಗಳನ್ನು ನೋಡುತ್ತಿದ್ದಾಗಲೆ ಇಂದಕ್ಕನ ಮನಸ್ಸಿನ ಯಾವುದೊ ಒಂದು ಜಾಗ್ರುತಭಾಗಕ್ಕೆ ಕುಮಾರನು ಮನೆಬಿಟ್ಟು ಹೋದುದರ ನೆನಪಾಗಿ ಎದೆಯಲ್ಲಿ ದಡದಡಿಸಿತು. ಹಾರಿಬಿದ್ದು ಎಚ್ಚತ್ತಳು.

ಹೊರಕ್ಕೆ ಬೆಳ್ಳಗೆ ಬೆಳಗಾಗಿದ್ದಿತು.

ಕನಸಿನಲ್ಲಿ ಕುಮಾರನ ಬಾಯಿಂದ ಕೇಳಿದ "ನೀನು ಪುಟ್ಟನ ತಾಯಿ" ಎಂಬ ಮಾತುಗಳನ್ನು ಇಂದಕ್ಕನ ಕಿವಿಗಳು ಆಗಾಗ ಕೇಳುತ್ತಿದ್ದುವು.

---

# ನನ್ನ ಹುಚ್ಚು

ನೆನಪಿನ ಘನತೆಯನ್ನು ಎನಿತೆನಿತು ಕೊಂಡಾಡಿದರೂ ತೀರದು. ನೆನಪಿನಿಂದಲೇ ಧರ್ಮ, ನೆನಪಿನಿಂದಲೇ ಕರ್ಮ; ನೆನಪು ಇರುವುದೆಂದೇ ಜಪ, ನೆನಪು ಇರುವುದೆಂದೇ ತಪ; ನೆನಪೊಂದು ಇರದಿದ್ದರೆ, ಶ್ರುತಿ-ಸ್ಮೃತಿಗಳೂ ಇತಿಹಾಸ-ಪುರಾಣಗಳೂ ಇದುವರೆಗೆ ಉಳಿಯುತ್ತಿರಲಿಲ್ಲ; ಹಿಂದುಸ್ಥಾನಕ್ಕೆ ಹಿಂದೆ ಎಷ್ಟೋ ಸಲ ಬಂದ ವಿಪ್ಲವಗಳಲ್ಲಿ ಸಿಕ್ಕು, ನುಗ್ಗುನುಗ್ಗಾಗಿ ಹೋಗುತ್ತಿದ್ದುವು. ನೆನಪೊಂದು ಇರದಿದ್ದರೆ ಸ್ವದೇಶಪ್ರೀತಿಯೆಲ್ಲಿಯದು? ಸ್ವಭಾಷೆಯ ಅಭಿಮಾನವೆಲ್ಲಿಯದು? ನಾವು ಈಗ ಸ್ವಾತಂತ್ರ್ಯಕ್ಕಾಗಿ ಬಾಯಿಬಿಡುತ್ತಿರುವುದು, ನಮ್ಮ ಹಿಂದಣ ಪ್ರತಾಪ-ವೈಭವಗಳ ನೆನಪಿನಿಂದಲೇ; ಇದು ಇರದೆ ಇದ್ದಲ್ಲಿ, ಮನುಷ್ಯನು ಕಣ್ಣಿದ್ದು ಕುರುಡನು, ಕಿವಿಯಿದ್ದು ಕಿವುಡನು, ಮಾತುಗಳಿದ್ದು ಮೂಕನು, ಬಗೆಯಿದ್ದು ಬದುಕಿದ ಹೆಣನು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಈ "ನೆನಪು" ಎಂಬುದೊಂದು ಇರುವುದರಿಂದಲೇ ಜಗತ್ತು ಸುಯಂತ್ರಿತವಾಗಿ ಸಾಗಿದೆಯೆನ್ನಲು ಆತಂಕವಾವುದೂ ಇರದು.

ಪರಮಾತ್ಮನು ನೆನಪೊಂದನ್ನು ಕೊಡದಿದ್ದಲ್ಲಿ, ಮನುಷ್ಯನ ಜನುಮದಲ್ಲೇನೂ ಹುರುಳಿಲ್ಲ ನೋಡಿ! ಹಿಂದೆ ನಡೆದ ಸಂಗತಿಗಳ ನೆನಪು ಇಂದು ನಮಗೆ ಇರುವುದರಿಂದಲೇ, ನಮ್ಮ ಮುಂದಿನ ಬಾಳುವೆಯಲ್ಲಿ ಬರುವ ಎಡರುಗಳಿಂದ ಕಡೆಗಾಗಲು ನಾವು ಸಮರ್ಥರಾಗುವೆವು. ಹಿಂದಿನ ನಮ್ಮ ಹುಚ್ಚುತನದ ಚಿತ್ರವು ಇಂದು ನಮ್ಮ ಕಣ್ಣೆದುರಿಗೆ ನಿಲ್ಲುವುದು. ಧನದ ರಾಶಿಯು ದೊರೆತರೂ ನೆನಪಿನಿಂದಾಗುವಷ್ಟು ಆನಂದವಾಗದು. ಈಗ

ನೋಡಿ! ಇಂದಿನ ದೀವಳಿಗೆಯಲ್ಲಿ ನಾವೆಷ್ಟು ಆನಂದವನ್ನು ಅನುಭವಿಸಿದರೂ ಅದು ಹಿಂದಿನ ದೀವಳಿಗೆಯ ನೆನಪಿನ ಆನಂದಕ್ಕೆ ಸರಿಯಾಗಲಾರದು. ಇದು ಎಲ್ಲರ ಅನುಭವಕ್ಕೂ ಬಂದ ಮಾತು. ಭಗವಂತನು ಈ ನೆನಪಿನಲ್ಲಿ ಅಂತಹ ಇಂದ್ರಜಾಲವನ್ನೇನು ಇಟ್ಟಿರುತ್ತಾನೋ ಏನೋ!

ಈಗ ನಾನು ತಮಗೆ ಹೇಳುತ್ತಿರುವುದು, ನನ್ನ ಎಳೆಯತನದಲ್ಲಿಯ ನೆನಪು. ನನಗಾಗ ಆರು ವರ್ಷಗಳಾಗಿರಬಹುದು. ಇನ್ನೂ ಕಿರಿಯಳಿದ್ದರೂ ನನಗೆ ಎಷ್ಟೋ ಸಂಗತಿಗಳು ತಿಳಿಯುತ್ತಿದ್ದವು. ತುಂಟ ಹಸುವಿನ ಕೊರಳಲ್ಲಿ ಕಟ್ಟಿದ ಗಂಟೆಯಂತೆ, ನನ್ನ ನಾಲಗೆಯು ಯಾವಾಗಲೂ ನುಡಿಯುತ್ತಲೇ ಇರುವುದು. ಕಂಡಮಾತನ್ನು ಕಂಡಂತೆಯೇ ಹೇಳುವುದರಲ್ಲಿ ನನ್ನ ಕೈಹಿಡಿಯುವವರು ಯಾರೂ ಇಲ್ಲವೆಂದು, ಮನೆಯವರೂ ಮಂದಿಯೂ ಮಾತನಾಡುತ್ತಿದ್ದರು. ಮನೆಯಲ್ಲಿಯ ಸುದ್ದಿಯನ್ನು ಹೊರಕ್ಕೆ ಬೀರುವುದೂ ಹೊರಗಿನ ಸಂಗತಿಯನ್ನೆಲ್ಲ ಮನೆಯಲ್ಲಿ ಹೇಳುವುದೂ ನನಗೆ ಬೇಸರಬಾರದ ಕೆಲಸ. ವಿದ್ಯೆಕಲಿಯದೆ ಇದ್ದ ನಮ್ಮ ತಾಯಿಗೆ ನಾನೊಂದು "ವಿಜಯ" ವರ್ತಮಾನಪತ್ರವಿದ್ದಹಾಗೆ. ನನ್ನ ಈ ಗುಣಕ್ಕೆ. ಎಷ್ಟೋ ಜನರು ನನ್ನನ್ನು ಹೊಗಳಿ "ಮುದ್ದಿನ ಮೆಚ್ಚು" ಕೊಡುವರು; ಎಷ್ಟೋ ಜನರು "ಅಧಿಕಪ್ರಸಂಗಿ" ಎಂಬ ಪದವಿಯನ್ನು ಕೊಡುವರು. ನನಗಾಗ ಮೆಚ್ಚೆಂದರೂ ತಿಳಿಯದು, ಪದವಿಯೆಂದರೂ ತಿಳಿಯದು; ಈಗಿನ ನನ್ನ ಬಣ್ಣದ ಮಾತಿವು. ನಡೆದ ಸಂಗತಿಯನ್ನು ಇದ್ದಕ್ಕಿದ್ದಂತೆಯೆ ಬಣ್ಣಿಸಿ, ಕೈಕಣ್ಣುಗಳಿಂದ ಅಭಿನಯಿಸಿ ಹೇಳುವುದೊಂದು ಮಾತ್ರ ಆಗ ನನಗೆ ಗೊತ್ತು. ನಾನೇನೋ ಚೆಲುವೆಯಂತೆ; ಮಂದಿಯೆನ್ನುತ್ತಿದ್ದರು. ದೊಡ್ಡ ದೊಡ್ಡ ಕಣ್ಣು, ನಿಟಾದ ಮೂಗು, ಕಪ್ಪು ಉಂಗುರುಗೂದಲು, ಹೊಂಬಣ್ಣದ ಮೆಯ್ಯ ಮಾತ್ರ ನನ್ನದಿದ್ದಿತು. ಸರಿ! ನಾನಿದನ್ನು ಒಪ್ಪಿಕೊಳ್ಳುತ್ತೇನೆ. ನಾನಪ್ಪೆ ಚೆಲುವೆಯೆಂಬುದನ್ನು ಆಗ ನಾನೇನೂ ಅರಿಯೆನು. ನನಗೆ ನೋಡಿದುದೆಲ್ಲ ಚೆಲುವೇ ಕಾಣುತ್ತಿದ್ದಿತು. ನನ್ನ ಚೆಲುವಿಕೆಗಾಗಿಯೂ ಮುದ್ದುಮಾತಿಗಾಗಿಯೂ ನಾನು ಎಲ್ಲರ ಮುಂಗೈಯರಗಿಳಿಯಾಗಿದ್ದೆನು. ಎಲ್ಲರೂ ನನ್ನನ್ನು ಪ್ರೀತಿಸುವರು. ನನ್ನ ಮಾತಿನ ರೀತಿಯನ್ನು ಕಂಡವರಿಲ್ಲ ನನ್ನ ಜಾಣ್ಮೆಯನ್ನು ಕೊಂಡಾಡಿ "ಇವಳೇನೇ ನಮ್ಮವ್ವಾ! ನಾಳೆ.... ಮಾಡಿಕೊಂಡ ಗಂಡನನ್ನು ಪೇಟಿಯಲ್ಲಿಟ್ಟು ಮಾರಾಟಮಾಡುತ್ತಾಳೆ."

ಎನ್ನುವರು. ನನಗಾಗ "ಗಂಡನನ್ನು ಮಾರಿಕೊಂಡು ಬರುವುದು ಜಾಣತನದ ಲಕ್ಷಣವೇನೋ" ಎಂದೆನಿಸುತ್ತಿತ್ತು. ಎಲ್ಲರೂ ನನ್ನನ್ನು "ಚಿತ್ರಾ!" ಎಂದು ಕರೆಯುವರು. ನನ್ನ ತೊಟ್ಟಿಲಲ್ಲಿಟ್ಟ ಹೆಸರದು. ನಮ್ಮ ತಂದೆಯು ಮಾತ್ರ ಚೇಷ್ಟೆಯಿಂದ ನನ್ನನ್ನು "ಸುದ್ದಿಯ ಸೂರಕ್ಕ" ಎಂದೂ "ಮಾತಿನಮಲ್ಲಮ್ಮ" ಎಂದೂ ಕರೆಯುತ್ತಿದ್ದನು.

ನಮ್ಮಕ್ಕ ಗಂಡುಮಗುವನ್ನು ಹೆತ್ತು, ಮೊದಲನೆಯ ಸಲ ತವ್ಮತ್ತೆಯ ಮನೆಗೆ ಹೋಗುವಾಗ, ನಾನೂ ಅವಳ ಸಂಗಡ ಹೋಗಿದ್ದೆನು. "ಹೆಸರು ಕ್ಷೀರಸಾಗರಭಟ್ಟನಾದರೂ ಮನೆಯಲ್ಲಿ ಮಜ್ಜಿಗೆಗೆ ತತ್ವಾರ" ಎಂದೇನೋ ಹೇಳುತ್ತಾರಲ್ಲ! ಅದರಂತೆಯೇ ನಮ್ಮಕ್ಕನ ಅತ್ತೆಯ ಮನೆ. ಅತ್ತೆಯ ಮನೆಯೆಂದು ಹೆಸರದಕ್ಕೆ; ಅತ್ತೆಯೂ ಇಲ್ಲ, ಮಾವನೂ ಇಲ್ಲ. ಇರುವವರು ಅಕ್ಕ, ಭಾವ ಇಬ್ಬರೇ. ಈಗ ಮಗುವೊಂದು, ನಾನೊಬ್ಬಳು, ನಾಲ್ಕು ಜನರು.

ನಮ್ಮ ಭಾವ ತಾಲ್ಲೂಕು ಆಫೀಸಿನಲ್ಲಿ ಗುಮಾಸ್ತೆಯಾಗಿರುವನು. ತಿಂಗಳೊಂದಕ್ಕೆ ಅರುವತ್ತು ರೂಪಾಯಿಯ ಸಂಬಳ. ಬೊಗಸೆತುಂಬ ರೂಪಾಯಿ ಬರುವವು. ಮನೆಯಲ್ಲಿ ಯಾವ ಮಾತಿನ ಕೊರತೆಯೂ ಇಲ್ಲ. ಸರ್ವಸ್ವಾತಂತ್ರ್ಯವೂ ಅಕ್ಕನದೇ. ಸಂಬಳದ ರೂಪಾಯಿ ಮನೆಗೆ ಬರುವುದಷ್ಟೇ ತಡ; ಅಕ್ಕನ ಪೆಟ್ಟಿಗೆಯಲ್ಲಿ ಬಂದು ಬೀಳುವುವು. ಮಾಡಿಕೊಂಡು ತಿಂದರೆ ತಿಂಡಿತಿನಿಸುಗಳಿಗೆ ಕಡಿಮೆಯಿಲ್ಲ. ಎಲ್ಲವೂ ಅನುಕೂಲ. ಒಡವೆಗಳಷ್ಟು ಕಡಿಮೆಯಾಗಿದ್ದರೂ ದಿನದಿನಕ್ಕೆ ಒಂದೊಂದೇ ಹೊಸ ಹೊಸ ಒಡವೆಗಳು ಅಕ್ಕನ ಮೈಮೇಲೆ ಹೆಚ್ಚಾಗಿ ಕಾಣುತ್ತಿದ್ದುವು.

ನಮ್ಮಕ್ಕನಾದರೂ ನಾನು ಬಚ್ಚಿಟ್ಟುಕೊಳ್ಳುವುದಿಲ್ಲ ನೋಡಿ! ಅವಳಿಗೆ ಸಿಡುಕುತನವು ಹೆಚ್ಚು. ತನ್ನ ಮಾತುಗಳು ನಡೆಯಲೇಬೇಕೆಂಬ ಆಗ್ರಹ ಬಹಳ. ಈ ಗುಣದಿಂದ ಅವಳು, ಕಾರಣವಿಲ್ಲದೆಯೆ ಚೆಲ್ಲದಂತಹ ತನ್ನ ಬಾಳುವೆಯನ್ನು—ಆಗಾಗ—ಜೇವನ್ನಾಗಿ ಮಾಡಿಕೊಳ್ಳುವಳು. ನನಗೆ ಇದಕ್ಕಾಗಿ ಬೇಸರು. ಭಾವನೆಂದರೆ ಪ್ರತ್ಯಕ್ಷ ಶಂಕರನವತಾರ; ಭೋಲಾನಾಥ; ಹೆರವರಿಗೆ ಉಪಕಾರಮಾಡಬೇಕೆಂಬ ಬುದ್ಧಿಯುಳ್ಳವನು; ದೊಡ್ಡ ಮನಸ್ಸು; ನಾಲ್ಕು ಮಂದಿಗೆ ಬೇಕಾದವನು. ಆದರೇನು! ಅಕ್ಕನ ಸಿಡುಕುತನದ ಮುಂದೆ ಅವನ ಆಟವು ನಡೆಯದು. "ಸಾವಿರ ಕುದುರೆಯ

ಸರದಾರ, ಮನೆಯು ಹೆಂಡತಿಗೆ ಪಿಂಜಾರ.'' ಹೆಂಡತಿಯನ್ನು ಆನಂದ ದಲ್ಲಿರಿಸಬೇಕೆಂದು, ಯಾವಾಗಲೂ ಭಾವನ ಪ್ರಯತ್ನ; ಅಕ್ಕನ ಸಿಡುಕುತನ ವನ್ನೆಲ್ಲ ನಗೆಯ ಮೇಲೆ ಹಾಕಿ, ಅಕ್ಕನ ಪಾಲಿನ ನಗುವನ್ನೂ ತಾನೇ ನಗುತ್ತಿದ್ದನು. ಅಕ್ಕನು ಒಂದು ಕ್ಷಣದಲ್ಲಿ ನಗುತ್ತಿದ್ದವಳು ಮತ್ತೊಂದು ಕ್ಷಣದಲ್ಲಿ ಮುಖ ಗಂಟು ಹಾಕಿರುವಳು. ನನಗಿದರಿಂದ ಅಕ್ಕನ ಕಡೆಗೆ ನೋಡುವುದೆಂದರೆ ಅಂಜಿಕೆ; ಭಾವನನ್ನು ನೋಡಿದರೆ ಆನಂದವಾಗುತ್ತಿತ್ತಲ್ಲದೆ "ಪಾಪ" ಎನಿಸುತ್ತಿದ್ದಿತು. "ಅಕ್ಕ ನನ್ನವಳಾದರೆ ಭಾವ ನನ್ನವನೇ?'' ಎಂದು ಗಾದೆಯಿರುವುದಲ್ಲವೇ! ಇದರ ವಿಪರೀತ ಅನುಭವವು ನನಗಲ್ಲಿ ಬರುತ್ತಿದ್ದಿತು.

ನಮ್ಮ ಅಕ್ಕನ ಗೆಳತಿಯರೆಷ್ಟೋ ಜನ ಮನೆಗೆ ಬರುವರು. ಆ ಮಾತು ಈ ಮಾತು ಮಾತನಾಡುತ್ತ ಕುಳಿತುಕೊಳ್ಳುವರು. ಅವರಾಡುವ ಮಾತುಗಳಲ್ಲಿಯ ಮುಖ್ಯ ವಿಷಯವೆಂದರೆ ಒಡವೆಗಳ ಮಾತು, ಅತ್ತೆ-ಮಾವಂದಿರ ನಿಂದೆ, ಅತ್ತಿಗೆ-ಮೈದುನರ ಹಳಿವು ಇವೆ. ಮಾತನಾಡಿ ಮನೆಗೆ ಹೋಗಲು ಏಳುವರು. "ಇನ್ನೊಂದು ಸ್ವಲ್ಪ ಹೊತ್ತು ಕೂತುಕೊಳ್ಳಿರೇ" ಎಂದು ಅಕ್ಕನೆನ್ನುವಳು. "ಅಹುದವ್ವಾ ನಿನಗೇನು! ಮನೆಯಲ್ಲಿ ಮಾವನ ಕಾಟವಿಲ್ಲ. ಅತ್ತೆಯ ಕಟಕಟೆಯಿಲ್ಲ. ಗಂಡ-ಹೆಂಡಿರು ರಾಜ-ರಾಣಿಯರಂತೆ ಸುಖವಾಗಿದ್ದೀರಿ. ಹೇಗೆ ಮಾಡಿದರೂ ನಿನಗೆ ಚೆಂದವೇ! ನಮಗೋ ಸ್ವಲ್ಪ ತಪ್ಪಾದರೆ ತೀರಿತು, ಮನೆಯಲ್ಲಿ ಮುಳ್ಳಿನ ಮೇಲೆ ನಿಲ್ಲಿಸುತ್ತಾರೆ!........'' ಇತ್ಯಾದಿಯಾಗಿ ಇನ್ನೂ ಏನೇನೋ ಹೇಳಿ, ಅಕ್ಕನ ಗೆಳತಿಯರು ತಮ್ಮ ತಮ್ಮ ಮನೆಗೆ ಹೋಗುವರು. ಅದೆಲ್ಲವನ್ನು ಕೇಳಿ "ನಮ್ಮಕ್ಕನೆಷ್ಟು ಪುಣ್ಯವಂತಿಯೋ'' ಎಂದು ನನಗೆನಿಸುವುದು. "ಅತ್ತೆ-ಮಾವಂದಿರೆಂದರೆ ಸೊಸೆಯಂದಿರಿಗೆ ಏಳೇಳು ಜನ್ಮದ ವೈರಿಗಳು!'' ಎಂಬ ಸಿದ್ಧಾಂತವನ್ನು ನಾನಲ್ಲಿ ಕಂಡುಹಿಡಿದೆನು. ಸಿದ್ಧಾಂತವೇನೋ ತ್ರಿಕಾಲಾಬಾಧಿತವಂತೆ. ಆದರೆ ನಾನು ಮಾಡಿದ ಸಿದ್ಧಾಂತವು ನನ್ನ ಮದುವೆಯಾದೊಡನೆ ಎಲ್ಲಿಯೋ ಮರೆಯಾಯಿತು. ನಮ್ಮತ್ತೆಯು ನನ್ನ ಸಿದ್ಧಾಂತವನ್ನು ಸುಳ್ಳುಮಾಡಿಬಿಟ್ಟಳು. ಇನ್ನೂ ಮುಂದೆ ಕೇಳಿ!

ಅಕ್ಕನದು ಒಡವೆಗಳ ಮೇಲೆ ತುಂಬ ಮಮತೆ. ಒಡವೆಗಳೊಂದಿದ್ದರೆ ಊಟಬೇಡ, ತಿನಿಸುಬೇಡ, ಮಾತುಬೇಡ, ಕತೆಬೇಡ, ಮಕ್ಕಳು

ಮರಿ ಬೇಡ. ಹೂವೀಳ್ಯದ ಗೌರಿಯಂತೆ ಯಾವಾಗಲೂ ಒಡವೆಗಳನ್ನಿಟ್ಟು ಕೊಂಡು ಸಿಂಗಾರಾಗಿರಬೇಕೆಂದು ಅಕ್ಕನ ಬಗೆಯ ಬಯಕೆ. ಅಕ್ಕನಿಗೆ ಹೆಚ್ಚು ಒಡವೆಗಳನ್ನಿಟ್ಟುಕೊಳ್ಳುವವರೇ ಅಚ್ಚುಮೆಚ್ಚಿನ ಗೆಳತಿಯರು. ಅವಳು ಗುಣವನ್ನು ನೋಡುವವಳಲ್ಲ; ಬರಿ ಹಣವನ್ನೆ. ಅಕ್ಕನಿಗೆ ಗೆಳತಿಯರು ದೊರೆತುದೂ ಅವಳ ಗುಣಕ್ಕಾಗಿಯಲ್ಲ. ಒಡವೆಗಳ ಅಂದ ಚೆಂದಕ್ಕೆ ಮನಸೋತು; ತಿಂಡಿತಿನಿಸುಗಳಿಗೆ ಮರುಳಾಗಿ. ಅಕ್ಕನು ಹೇಳಿದ ಮಾತನ್ನು ನಡೆಯಿಸುವುದರಲ್ಲಿ ಭಾವನಿಂದ ನಸು ತಪ್ಪಾದರೆ ತೀರಿತು. ಮೂರು ಮೂರು ದಿನ ಮಾತಿಲ್ಲ, ಮೋರೆಯ ಗಂಟು ಬಿಚ್ಚುವುದಿಲ್ಲ ಆದರೆ ನಾನೊಂದು ಗುರುತು ಮಾಡಿ ಇಟ್ಟಿದ್ದೆನು. ಪ್ರತಿತಿಂಗಳ ಮೊದಲನೆಯ ತಾರೀಖಿನ ದಿನ ಮಾತ್ರ, ಅಕ್ಕನ ಉರಿಮೋರೆಯು ಅಡಗಿ, ನಗೆಯು ನಲಿದಾಡುವುದು. ಅಂದು ಭಾವನಿಗೂ ಆನಂದ, ಅಕ್ಕನಿಗೂ ಆನಂದ. ಇಬ್ಬರೂ ನಗೆಯಾಡುವರು; ಕೆಲೆದಾಡುವರು. ಆಗ ನಾನು "ದಿನಾಲು ಒಂದನೆಯ ತಾರೀಖು ಏಕಿರಲಿಕ್ಕಿಲ್ಲ?" ಎಂದುಕೊಳ್ಳುವೆನು. ಇಬ್ಬರೂ ನಗೆಯಾಡುತ್ತಿದ್ದಾಗ ನನಗೆ ಬಲು ಆನಂದವಾಗುತ್ತಿದ್ದಿತು.

* * * *

ಯಾವುದೋ ತಿಂಗಳ ಮೊದಲನೆಯ ತಾರೀಖು. ಅಂದು ಭಾವನಿಗೆ ಸಂಬಳ ಬರುವ ದಿನ. ಭಾವನಿಗೆ ಬೇಕಾದ ಎಲ್ಲ ಅನುಕೂಲತೆಗಳನ್ನೂ ಅಕ್ಕನು ಕೈಮುಟ್ಟ ಮಾಡಿಕೊಟ್ಟಳು. ಭಾವನ ಸ್ನಾನವಾಗಿ ಊಟಕ್ಕೆ ಕುಳಿತ. ನಾನೂ ಕುಳಿತಿದ್ದೆನು. ಊಟ ನಡೆದಿರಲು "ಹೋದ ತಿಂಗಳಲ್ಲಿಯೆ ತರುವುದಾಗಿ ಹೇಳಿದ್ದಿರಿ; ಆಗಲಿಲ್ಲ. ಈ ತಿಂಗಳಲ್ಲಿಯಾದರೂ ಚಿನ್ನದ ಮೊಗ್ಗೆಸರವನ್ನು ಮರೆಯದೆ ತರಬೇಕು." ಎಂದು ಅಕ್ಕನು, ಗಂಡಸರನ್ನು ಬಲೆಯಲ್ಲಿ ಕೆಡಹುವ ನೋಟ-ನಗೆ-ಅಭಿನಯಗಳಿಂದ ಹೇಳಿದಳು. ಆಗಿನ ಅವಳ ರೀತಿಯನ್ನು ಕಂಡವರು "ಇವಳು ಗಂಡನಿಗೆಷ್ಟು ವಿಧೇಯಳಾಗಿ ನಡೆಯುತ್ತಾಳೋ!" ಎಂದು ಕೊಂಡಾಡಬಹುದಾಗಿದ್ದಿತು. ಆಗ ಇದೊಂದೂ ನನಗೆ ತಿಳಿಯದು. ಅಂದಿನ ಚಿತ್ರವು ಇಂದೆಯೂ ನನ್ನ ಕಣ್ಣ ಮುಂದೆ ಕಟ್ಟಿರುವುದರಿಂದ, ಅದರ ಬಗೆಯನ್ನು ಕಂಡುಹಿಡಿದು ಬಣ್ಣಿಸಿದ ಈಗಿನ ನನ್ನ ಮಾತುಗಳಿವು.

"ನೀನು ನಗೆಮೊಗದಿಂದ ನಲಿದಾಡುತ್ತಿದ್ದರೆ, ಒಂದು ಮೊಗ್ಗೆಸರವೇ

ಏಕೆ! ಭಾಗ್ಯದ ಲಕ್ಷ್ಮಿಯನ್ನೇ ಬಾಗಿಲಲ್ಲಿ ತಂದು ಕೂಡಿಸುತ್ತೇನೆ. ಆದರೆ ನಿನ್ನ ಉರಿಮೋರೆಯನ್ನು ಕಂಡೊಡನೆಯೆ ಬಾಳುವೆಯೆ ಬೇಡವಾಗಿ ಸನ್ಯಾಸತೆಗೆದುಕೊಳ್ಳಬೇಕೆಂದೆನಿಸುವುದು." ಭಾವನು ನಗುತ್ತ ನುಡಿದನು.

ಅಕ್ಕನು ನಾಚಿ ಮುಖ ಕೆಳಕ್ಕೆಮಾಡಿ "ಸಾಕು ಇಲ್ಲದ್ದೊಂದು ಮಾತು!" ಎಂದು ನುಡಿದು ಮತ್ತೆ ಮುಖವೆತ್ತಿ "ಮರೆಯದೆ ತರುತ್ತೀರಲ್ಲವೇ?" ಎಂದು ಬಾಯಿ ಕಣ್ಣುಗಳೆರಡರಿಂದಲೂ ಮುಗುಳುನಗೆ ನಗುತ್ತ ಕೇಳಿದಳು.

ಭಾವ ಒಪ್ಪಿಕೊಂಡನು. ಊಟಮಾಡಿ ಕೈ ತೊಳೆದುಕೊಂಡು, ಆಫೀಸಿಗೆ ಹೊರಟುಹೋದನು.

ಅಂದು ಅಕ್ಕನ ಆನಂದಕ್ಕೆ ಅಳತೆಯೇ ಇರಲಿಲ್ಲ. ಮನೆಗೆ ಬಂದವರೆಲ್ಲರ ಮುಂದೆಯೂ ಮೊಗ್ಗೆಯ ಸರದ ಮಾತೇಮಾತು. "ಹಾಗಾದರೇನು ಬಿಡವ್ವಾ. ನೀನು ಪುಣ್ಯವಂತಿ. ಹೇಳಿದಂತೆ ಕೇಳುವ ಗಂಡ ಸಿಕ್ಕಿದ್ದಾನೆ. ಇಂದು ಮೊಗ್ಗೆಯ ಸರವನ್ನು ಮಾಡಿಸುತ್ತೀ; ನಾಳೆ ಬಂಗಾರದ ಮನೆಯನ್ನೂ ಕಟ್ಟಿಸುತ್ತೀ!" ಎಂದಾರೋ ಎಂದರು. ತಲೆಗೊಂದು ಮಾತಾಡಿ ಅಕ್ಕನ ದೈವವನ್ನು ಕೊಂಡಾಡಿದರು. ಅಕ್ಕನು ಕೃತಕೃತ್ಯಳಾದವಳಂತೆ ನಗುತ್ತಿದ್ದಳು ಮಾತ್ರ.

"ಆಫೀಸಿನಿಂದ ಹಸಿದು ಮನೆಗೆ ಬರಬಹುದು" ಎಂದು ಹೇಳಿ, ಎಂದೂ ನಾನು ಕಾಣದ ಕಳವಳವನ್ನು ತೋರಿಸಿ, ಭಾವನಿಗಾಗಿ ಅಕ್ಕನು ತಿಂಡಿಯ ಸಿದ್ಧತೆಯನ್ನು ಮಾಡಿಟ್ಟಳು. ಅಂದು ಅಕ್ಕನಿಗೆ ಹಗಲು ಇಪ್ಪತ್ತುನಾಲ್ಕು ತಾಸಿನದಿದೆಯೇನೋ ಎನಿಸಿರಬಹುದು. ಸೂರ್ಯನಾವಾಗ ಮುಳುಗುವನೋ, ಆಫೀಸು ಯಾವಾಗ ಬಿಡುವುದೋ—ಎಂದು ಆತುರವಾಗಿರಬಹುದು. ಭಾವನು ಯಾವಾಗ ಬರುವನೋ ಎಂಬ ಯೋಚನೆಯೇ ಯೋಚನೆ. ಕಡೆಗೊಮ್ಮೆ ಸಂಜೆಯಾಯಿತು. ಅಕ್ಕನ ಅರಳಿದ ಕಣ್ಣು ಬೀದಿಯ ಬಾಗಿಲ ಕಡೆಗೆಯೇ ನೋಡುತ್ತಿದ್ದುವು. ವನದಲ್ಲಡಗಿದ ಕೃಷ್ಣನು ರಾಧೆಯ ನಿಷ್ಠೆಗೆ ಮೆಚ್ಚಿ ಮೈದೋರಿದಂತೆ, ಭಾವನು ಆಫೀಸಿನಿಂದ ಒಮ್ಮೆ ಬಂದುಬಿಟ್ಟನು. ನಾನು—ಅಕ್ಕ ಕುಳಿತಲ್ಲಿಯೇ ಬಂದನು.

"ನಾನು ಹೇಳಿದ ಒಡವೆಯನ್ನು ತಂದುದಾಯಿತೇನು?" ಅಕ್ಕನು ಆತುರದಿಂದ ಕೇಳಿದಳು.

"ಇಲ್ಲ; ಇಂದೆಯೂ ತರಲಿಕ್ಕೆ ಆಗಲಿಲ್ಲ." ಭಾವ ಸಮಾಧಾನದಿಂದ ನುಡಿದನು.

"ಅದೇಕೆ? ನೆನಪಾಗಲಿಲ್ಲವೇ?" ಇನ್ನಷ್ಟಾತುರದಿಂದ ಅಕ್ಕ ಕೇಳಿದಳು. "ನೆನಪೇನೋ ಆಯಿತು. ಆದರೆ ರಾಮರಾಯರಿದ್ದಾರಲ್ಲ! ಪಾಪ! ಅವರ ಮಗಳು ಹಡೆದಿದ್ದಾಳೆ. ಐವತ್ತು ರೂಪಾಯಿಗಳನ್ನು ಕೈಗಡ ಕೊಡಿರೆಂದು ದೈನ್ಯದಿಂದ ಕೇಳಿದುದರಿಂದ, ರೂಪಾಯಿಗಳನ್ನವರಿಗೆ ಕೊಟ್ಟೆನು. ಇನ್ನು ಹದಿನೈದು ದಿನಗಳಿಗೆ ಮರಳಿ ಕೊಡುತ್ತಾರೆ. ರೂಪಾಯಿ ಬಂದ ಕೂಡಲೆ ಒಡವೆಯನ್ನು ತರಬೇಕೆಂದು, ಇಂದು ಬಿಟ್ಟೆನು." ಭಾವ ಮತ್ತೆ ಸಮಾಧಾನದಿಂದಲೇ ಉತ್ತರಕೊಟ್ಟನು.

ಆಯಿತು; ಅಕ್ಕನ ಮುಖ ಓರೆಯಾಯಿತು. ಮನವು ಕೊಂಕಿತು. ಹುಬ್ಬುಗಳು ಗಂಟುಹಾಕಿದುವು. ಮಾನಮುಕ್ಕಾಯಿತು. ಬಾಯಿಯೇನೋ ಗೊಣಗುಟ್ಟಹತ್ತಿತು. ಇನ್ನೂ ಮುಂದೆ ಏನೇನಾಗುತ್ತಿತ್ತೋ ಏನೋ! ಯಾರೋ ಕರೆಯಲಿಕ್ಕೆ ಬಂದುದರಿಂದ ಭಾವ ಮತ್ತೆ ಹೊರಕ್ಕೆ ಹೋದ.

ಅಕ್ಕ ಒಳಕ್ಕೆ ಹೋದಳು. ಬಹಳ ಹೊತ್ತಾಯಿತು; ಹೊರಕ್ಕೆ ಬರಲೇ ಇಲ್ಲ. "ಅಕ್ಕಾ!" ಎಂದು ಕರೆದೆ ಏನನ್ನಾದರೂ ತಿಂದು ನುಂಗುತ್ತಿರುವ ಸ್ವರದಲ್ಲಿ "ಓ, ಬಾರೇ ಇಲ್ಲಿ" ಎಂದು ನನ್ನನ್ನು ಒಳಕ್ಕೆ ಕರೆದಳು. ಹೋದೆ; ಭಾವನಿಗೆಂದು ಮಾಡಿದ್ದ ತಿಂಡಿಯಲ್ಲಿ ಅರ್ಧಕ್ಕಿಂತ ಹೆಚ್ಚು ತೀರಿತ್ತು. ಮಧ್ಯಾಹ್ನದಲ್ಲಿ ಉಳಿದ ಅನ್ನವನ್ನೂ, ಭಾವನಿಗೆಂದು ಮಾಡಿದ ತಿಂಡಿಯಲ್ಲಿ ಕೊಂಚವನ್ನೂ ನನಗೆ ಹಾಕಿದಳು. ನಾನೂ ಊಟ ಮಾಡಿದೆನು. ಅಕ್ಕ ಹಾಸಿಗೆಹಾಸಿ ಮಲಗಿಬಿಟ್ಟಳು. ನಾನು ಮಗುವಿನ ತೊಟ್ಟಿಲು ತೂಗುತ್ತ ಕುಳಿತೆನು. ಭಾವನ ಊಟದ ಏರ್ಪಾಡನ್ನೇನೂ ಮಾಡದೆ ಮಲಗಿದುದನ್ನು ಕಂಡು, ಅಕ್ಕನ ಮೈಯಲ್ಲಿ ಅವತಾರಸಂಚಾರ ವಾಗಿದೆಯೆಂದು ತಿಳಿದೆನು. ನಾನು ಆರುವರುಷದವಳು; ಆಗ ಏನುತಾನೇ ಮಾಡುವಂತಿದ್ದೆ!

ಏಳುವರೆ ಗಂಟೆಗೆ ಭಾವನು ಮನೆಗೆ ಬಂದನು. ಮೊಗಸಾಲೆಯಲ್ಲಿ ಕುಳಿತೇ ಕುಳಿತನು. ಊಟಕ್ಕೆ ಯಾರೂ ಎಬ್ಬಿಸಲೇ ಇಲ್ಲ. ಎದ್ದು ತಾನೇ ಒಳಕ್ಕೆ ಬಂದನು. ಅಕ್ಕ ಮಲಗಿದುದನ್ನು ನೋಡಿದನು. "ಏನೇ ಚಿತ್ರಾ! ಇಂದು ಅಡಿಗೆ ಊಟ ಇಲ್ಲವೇನೇ?" ಎಂದು ಕೇಳಿದನು. "ಏನೋ

ಅಪ್ಪ! ಅಕ್ಕ ಮೂರೂಸಂಜೆಯಿಂದಲೂ ಮಲಗಿಬಿಟ್ಟಿದ್ದಾಳೆ" ಎಂದು ನಾನೆಂದೆನು. ಭಾವನು ಅಕ್ಕನ ಬಳಿಗೆ ಹೋಗಿ, ಏಳೆಂದು ಪರಿಪರಿಯಿಂದ ಬೇಡಿಕೊಂಡನು. ತಪ್ಪಾಯಿತೆಂದನು. "ನಾಳೆಯೇ ನೀನು ಹೇಳಿದ ಒಡವೆಯನ್ನು ತಂದುಕೊಡುತ್ತೇನೆ." ಎಂದು ಹೇಳಿದನು. ಆದರೇನು! ಅಕ್ಕನು ಮಿಟ್ಟನೆ ಮಿಸುಕಲಿಲ್ಲ. ಇದೆಲ್ಲವನ್ನು ನೋಡಿ ನನಗೆ ಅಕ್ಕನ ವಿಷಯವಾಗಿ ಬೇಸರ, ಭಾವನ ವಿಷಯವಾಗಿ ಕನಿಕರ.

ಭಾವ ಬೇಸತ್ತು ಬೆಂಡಾಗಿ ಹೋಗಿ, ಪಡಸಾಲೆಯಲ್ಲಿ ಕುಳಿತು ಕೊಂಡ. ಎದುರುಮನೆಯ ಗೋವಿಂದರಾಯರು ತಮ್ಮ ಮನೆಯಲ್ಲಿಂದಲೇ ಕೂಗಿ "ಏನು ರಾಯರೇ! ಊಟವಾಯಿತೆ?" ಎಂದು ಭಾವನನ್ನು ಕೇಳಿದರು. "ಹೂಂ, ಆಯಿತು. ನಿಮ್ಮದಾಯಿತೋ!" ಎಂದು ಮರಳಿ ಭಾವ ಕೇಳಿದ. ನನಗೆ ನಗೆ ಬಂದಿತು. ಮೆಲ್ಲನೆ ನಕ್ಕುಬಿಟ್ಟೆನು. ನಮ್ಮಕ್ಕನು ಉಂಡು ಉಪವಾಸಿ; ಭಾವನು ಉಪವಾಸವಿದ್ದು ಉಂಡವನು. ಹೇಗಿದೆ ನೋಡಿ ರೀತಿ!

ಮರುದಿನ ಮುಂಜಾವಿನಲ್ಲಿ ಎದ್ದು ಭಾವ ಮೊಗ್ಗೆಯಸರವನ್ನು ತಂದಾಗಲೇ ಅಕ್ಕ ಮುಸುಕು ತೆಗೆದಳು. ದಿನದ ಮನೆಯ ಕೆಲಸಕ್ಕೆ ತೊಡಗಿದಳು. ನಮ್ಮ ತಂದೆ ದಿನಾಲು ಸಂಜೆಯಲ್ಲಿ ನಮಗೆ ಹಾಡುಕಲಿಸುತ್ತಿದ್ದ. ಅದರಲ್ಲಿ "ತಂದು ಬಂದರೆ ತನ್ನ ಪುರುಷಗೆ ಬನ್ನಿ ಬಳಲದಿರೆಂಬಳು; ಒಂದು ದಿನವು ತಾರದಿದ್ದರೆ ಹಂದಿ ನಾಯಂತೆ ಬೊಗಳ್ವಳು" ಎಂಬುದೊಂದು ನುಡಿಯನ್ನೂ ನಾನು ಕಲಿತಿದ್ದೆನು. ನಮ್ಮಕ್ಕನ ಅಂದಿನ ರೀತಿಯನ್ನು ಕಂಡು, ಆಗ ಈಗಿನಂತೆ ನಾನು ದೊಡ್ಡವಳಾಗಿದ್ದರೆ, ನನಗೆ ಈ ನುಡಿಯ ನೆನಪು ಆಗದೆ ಹೋಗುತ್ತಿರಲಿಲ್ಲ.

"ಇಷ್ಟು ಚಂಡಿತನದಿಂದ ನಡೆದರೂ ಭಾವ ಅಕ್ಕನನ್ನು ಎಷ್ಟೋ ಪ್ರೀತಿಯಿಂದ ನಡೆಯಿಸಿಕೊಳ್ಳುವನು. ಸಿಟ್ಟಿಗೇಳನು. ಭಾವನಿಗೇನು ಹುಚ್ಚೇ? ಅವನಿಗೆ ಬುದ್ಧಿ ಕೊಂಚ ಕಡಿಮೆಯೇ?" ಎಂದು ನಾನಾಗ ಅಂದುಕೊಂಡೆ. ಆದರೆ ನನ್ನ ಅನುಭವದಿಂದ "ಭಾವನಿಗೇನೂ ಬುದ್ಧಿ ಕಡಿಮೆಯಲ್ಲ; ನನಗೇ ಆ ವಿಷಯವು ಆಗ ತಿಳಿಯದು. ಭಾವನಿಗೆ ಹುಚ್ಚೆಂದುದು ನನ್ನ ಹುಚ್ಚುತನವೇ" ಎಂದು ಈಗೇನೋ ಸರಿಯಾಗಿ ಕಂಡು ಹಿಡಿದಿದ್ದೇನೆ.

ನಮ್ಮಣ್ಣನ ಉಪನಯನಕ್ಕೆಂದು ನಾನು-ಅಕ್ಕ ನಮ್ಮೂರಿಗೆ ಬಂದೆವು.

